

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೭ ಮಾರ್ಚ್ ೨೦೧೧ ಸಂಚಿಕೆ : ೩





ಭಕ್ತ ಸಾಗರದ ನಡುವೆ ವೈಭವಪೂರ್ಣ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಲು ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೭ ಮಾರ್ಚ್ ೨೦೧೧ ಸಂಚಿಕೆ : ೩


## ಒಳಪುಟಗಳಲ್ಲಿ ......................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಶ್ರೀ ಶ್ರೀಗಳವರ 104ನೇ ಜನ್ಮದಿನಾಚರಣೆ

ದಿನಾಂಕ ೦೩-೦೩-೨೦೧೧ಕ್ಕೆ **ಪರಮಪೂಜ್ಯ ಶ್ರೀ ಶ್ರೀಗಳವರು** ಶ್ರೀಮಠದ ನಿರಂಜನ ವಿರಕ್ತಾಶ್ರಮ ದೀಕ್ಷೆಯನ್ನು ಸ್ವೀಕರಿಸಿ ೮೧ ವರ್ಷಗಳು ಪೂರೈಸಿವೆ. ತಮ್ಮ ಗುರುವರೇಣ್ಯರಾದ **ಪೂಜ್ಯ ಶ್ರೀ ಉದ್ದಾನಶಿವಯೋಗಿಗಳ** ಕರಕಮಲಸಂಜಾತರಾದ ಶ್ರೀಗಳು ಗುರುಕಮ್ಮಟದಲ್ಲಿ ಟಂಕಿತರಾದ ಮಾನವೀಯತೆಯ ಮಂಗಳದೀಪ. ತಮ್ಮ ಗುರುಪೂಜ್ಯರನ್ನು *Hard Master* ಎಂದೇ ಭಕ್ತಿಯಿಂದ ಅನುದಿನವೂ ಕ್ಷಣ ಕ್ಷಣಾರ್ಧದಲ್ಲಿಯೂ ಸ್ಮರಿಸುವ ಪರಮಪೂಜ್ಯರು **'ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರದ'** ಪುಣ್ಯರೂಪರು. ಶ್ರೀಮಠವನ್ನು ಜಗದಗಲ ಪ್ರಸಿದ್ಧಿಸಿದವರು. ದಿನದ ಇಪ್ಪತ್ತು-ಇಪ್ಪತ್ತೊಂದು ಘಂಟೆಗಳವರೆಗೆ ಲೋಕಸೇವೆಗಾಗಿ ದುಡಿಯುತ್ತಿರುವ ದಯಾ ದ್ರಷ್ಟಾರರು. ೦೧-೦೪-೨೦೧೧ಕ್ಕೆ ನೂರಾಮೂರುವರ್ಷಗಳನ್ನು ಬೆಳಗಿ ನೂರಾನಾಲ್ಕರತ್ತ ಮುನ್ನಡೆದಿರುವ ಮಹಾನುಭಾವರು. ಪರಮಪೂಜ್ಯ ಶ್ರೀ ಶ್ರೀಗಳವರು ಶತಾಯು ತುಂಬಿದ ಶಕಪುರುಷರಾಗಿ ಭಕ್ತಕೋಟಿಯನ್ನು ಪ್ರೇಮಕಾರುಣ್ಯ ಜಂಗಮ ಜ್ಯೋತಿಯಾಗಿ ಆಶೀರ್ವದಿಸುತ್ತಿದ್ದಾರೆ.

ಮುಂಬರುವ ಏಪ್ರಿಲ್ ತಿಂಗಳಿನಲ್ಲಿ **ಪರಮಪೂಜ್ಯ ಶ್ರೀ ಶ್ರೀಗಳವರ ೧೦೪ನೇ ಜನ್ಮದಿನಾಚರಣೆ** ಹಾಗೂ **ನಿರಂಜನ ವಿರಕ್ತಾಶ್ರಮ ಸ್ವೀಕಾರದ ೮೧ನೇ ಮಹೋತ್ಸವ** ಸಾಕಾರಗೊಳ್ಳಲಿವೆ. ಅದಕ್ಕಾಗಿ ಸಿದ್ಧತೆಗಳು ನಡೆದಿವೆ. ಕೇಂದ್ರ ಮತ್ತು ರಾಜ್ಯಮಟ್ಟದ ನಾಯಕರು, ಧರ್ಮಗುರುಗಳು, ವಿದ್ವತ್ ಬಂಧುಗಳು, ಚಿಂತಕರು, ಕೃಷಿಕರು, ಮಹಿಳಾಮಣಿಗಳು, ಯುವಜನರು, ಕಲಾವಿದರು, ಸಾಂಸ್ಕೃತಿಕ ಲೋಕದ ಗಣ್ಯರು ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಸಮಾರಂಭದಲ್ಲಿ ಪಾಲ್ಗೊಳ್ಳುವವರಿದ್ದಾರೆ. ಗೋಷ್ಠಿಗಳು, ಸಮಾವೇಶಗಳು ನಡೆಯಲಿವೆ. ಗ್ರಂಥಗಳು ಲೋಕಾರ್ಪಣಗೊಳ್ಳಲಿವೆ- ವಿಶ್ವದ ೮೧ ಸಂತರನ್ನು ಕುರಿತ **'ಅನುಭಾವಪಥ'**, ಶ್ರೀಗಳವರ ಶತಮಾನೋತ್ಸವದ ಅಕ್ಷರರೂಪ **'ಯುಗಗಂಗಾ'** ಮತ್ತು ಸಿದ್ಧಗಂಗಾ ವಿಶೇಷಾಂಕ **'ನಿರಂಜನ'** ಗ್ರಂಥಗಳು ಸಿದ್ಧವಾಗುತ್ತಿವೆ. ಈ ಮೂರೂ ಕೃತಿಗಳ ಪ್ರಕಟಣಾ ಪೂರ್ವ ಬೆಲೆಯ ಯೋಜನೆಯೂ ಸಿದ್ಧವಾಗಿವೆ. ಮೂರೂ ಗ್ರಂಥಗಳ ಒಟ್ಟು ಬೆಲೆ **೨೫೦೦/- ರೂ.** ಇಷ್ಟು ಪ್ರಕಟಣಾ ಪೂರ್ವ ಬೆಲೆ ಕೇವಲ **೧೦೦೦/-ರೂ.** ಮಾತ್ರಕ್ಕೆ ನಿರ್ಧರಿಸಲಾಗಿದೆ. ಈ ಅವಕಾಶವನ್ನು ಆಸಕ್ತರು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಸದುಪಯೋಗಮಡಿಕೊಳ್ಳಲಾಶಿಸಲಾಗಿದೆ.

ನಡೆಯಲಿರುವ ಮಹೋತ್ಸವಗಳಿಗೆ **'ಸಿದ್ಧಗಂಗಾ'** ಸ್ವಾಗತಿಸುತ್ತದೆ.

-ಸಂಪಾದಕ







## ಶ್ರಮ

ಕಣ್ತುಂಬನಿದ್ದೆ, ಬಾಯ್ತುಂಬ ಮಾತು, ಹೊಟ್ಟೆ ತುಂಬಾ ಊಟ. ಇದು ನಿಮ್ಮ ದಿನಚರಿ. ಒಮ್ಮೆ ಯೋಚಿಸಿನೋಡಿ. ನಿಮ್ಮನ್ನು ಹೆತ್ತವರು ಹೊತ್ತವರು ಏನು ಮಾಡುತ್ತಿದ್ದಾರೆಂಬುದನ್ನು. ಕಣ್ಣಿಗೆ ನಿದ್ದೆಯಿಲ್ಲ, ಮಾತಾಡಲು ಬಾಯಿಬರದು, ಅರೆ ಹೊಟ್ಟೆಯ ಊಟದಿಂದ ದಿನದಿನವೂ ನಿಮಗಾಗಿ ನಿಮ್ಮ ಏಳಿಗೆಗಾಗಿ ದುಡಿಯುತ್ತಿದ್ದಾರೆ. ಆದರೆ ನೀವು ಒಂದು ದಿನವಾದರೂ ಅವರ ಕಷ್ಟಸಂಕಷ್ಟಗಳನ್ನು ಕುರಿತು ಯೋಚಿಸುತ್ತಿದ್ದೀರಾ. ನಿಮ್ಮನ್ನು ಶ್ರೀಮಠಕ್ಕೆ ಸೇರಿಸಲು ಅವರು ಪಟ್ಟ ಶ್ರಮವೆಷ್ಟು? ಮನೆಯಲ್ಲಿದ್ದ ಹಾಲು ಕೊಡುತ್ತಿದ್ದ ಹಸುವನ್ನು ಎಮ್ಮೆಯನ್ನು ಮಾರಿದ್ದರ ನೆನಪಿದೆಯೇ ಬಡ್ಡಿಗೆ ಹಣತಂದು ಶಾಲಾಕಾಲೇಜುಗಳ ಫೀಜು ಕಟ್ಟಿದ್ದರ ಜ್ಞಾಪಕವುಂಟೆ? ನಿಮ್ಮ ತಾಯಿಯ ಒಡವೆಯನ್ನು ಅಡವಿಟ್ಟು ನಿಮಗೆ ಪುಸ್ತಕ, ಬಟ್ಟೆ ಬರೆ ತಂದುಕೊಟ್ಟದ್ದನ್ನು ಎಂದಾದರೂ ನಿಮ್ಮ ಗೆಳೆಯರೊಂದಿಗೆ ಹಂಚಿಕೊಂಡಿದ್ದೀರಾ? ನಿಮ್ಮ ಶಿಕ್ಷಕರು ನಿಮ್ಮ ತರಗತಿಯಲ್ಲಿ ಹೇಳಿದ ಬುದ್ಧಿಮಾತುಗಳನ್ನು ಮನನ ಮಾಡಿದ್ದುಂಟೆ? ದಿನದಿನವೂ ಪ್ರಾರ್ಥನಾಸಭೆಯಲ್ಲಿ ನೀವು ಹೇಳುವ ಪ್ರಾರ್ಥನಾ ಗೀತೆಗಳ ಅರ್ಥವೇನೆಂದು ಚಿಂತಿಸಿದ್ದೀರಾ? ಪಾಠ ಪ್ರವಚನಗಳ ಬಗ್ಗೆ ಉಳಿಸಿಕೊಂಡಿರುವ ಶ್ರದ್ಧೆ ಆಸಕ್ತಿಗಳು ಎಷ್ಟು? ಕಾಲಹರಣ ಮಹಾಪಾಪವೆಂದು ಗೊತ್ತಿದೆಯೆ? ಟಿ.ವಿ. ; ಮೊಬೈಲುಗಳ ಸಹವಾಸದಿಂದ ಎಷ್ಟು ಜ್ಞಾನ ಗಳಿಸಿದ್ದೀರಿ? ದುಶ್ಚಟಗಳ ದಾಸರಾಗಿ ದುಃಖವನ್ನೇ ಹಾಸಿ ಹೊದ್ದುಕೊಳ್ಳುತ್ತಿದ್ದೇವಲ್ಲಾ ಎಂಬ ಎಚ್ಚರ ಎಂದಾದರೂ ನಿಮಗೆ ಬಂದದ್ದುಂಟೆ? ಮಕ್ಕಳೆ ನೀವು ಸ್ವೀಕರಿಸುವ ಪ್ರಸಾದದ ತುತ್ತು ತುತ್ತಿನಲ್ಲೂ ಸಾವಿರ ಸಾವಿರ ಶ್ರಮಜೀವಿಗಳ, ತ್ಯಾಗಶೀಲದ ಬೆವರು ಅಮೃತವಾಗಿ ನಿಮ್ಮ ಹೊಟ್ಟೆಯನ್ನು ತುಂಬುಸುತ್ತಿದೆ ಎನ್ನುವುದನ್ನು ಮರೆಯದೆ ಶ್ರದ್ಧಾಜೀವಿಗಳಾಗಿ, ವಿವೇಕಿಗಳಾಗಿ ಈ ರಾಷ್ಟ್ರದ ಸಂಪತ್ತಾಗಿ ಬೆಳೆಯಿರಿ.

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಜ್ಞಾನ ಗಮ್ಯಂ ದೃಢಪ್ರಾಜ್ಞಂ ದೇವದೇವಂ ತ್ರಿಲೋಚನಂ*
*ಮಹಾದೇವಂ ಮಹಾತ್ಮಾನಂ ಮಹಾಜ್ಞಾನ ಪರಾತ್ಪರಂ*
*ಮಹಾಪಾಪಹರಂ ದೇವಂ ಮದ್ದೇವ ದೇವ ದೇವಂ*
*ಹರ ಹರಾ ಶಿವ ಶಿವಾ ಜಯ ಜಯ ಜಯತು*
*ಶರಣ ಕರುಣಾಕರ ತ್ರಾಹಿ ಮಾಂ ಭಕ್ತವತ್ಸಲ*
*ಮತ್ಪ್ರಾಣನಾಥ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

### ಶ್ರೀವಾಣಿ

ಭರತಖಂಡಕ್ಕೆ ಬಂದಿರುವಂತಹ ಮಹಾವಿಪತ್ತು ಎಂದರೆ ಕಾಲವನ್ನು ಹಾಳು ಮಾಡುವುದು. ಬಹಳ ಮಂದಿ ಕಾಲದ ಮೌಲ್ಯವನ್ನು ಅರಿತುಕೊಂಡಿಲ್ಲ. ಅದನ್ನು ವ್ಯರ್ಥವಾಗಿ ಕಳೆಯುತ್ತಿದ್ದಾರೆ, ಅದರ ಪರಿಣಾಮವನ್ನು ರಾಷ್ಟ್ರ ಅನುಭವಿಸಬೇಕಾಗಿದೆ. ಆದ್ದರಿಂದ ಕಾಲವನ್ನು ವ್ಯರ್ಥವಾಗಿ ಕಳೆಯಬಾರದು. ಅದು ಸಾರ್ಥಕವಾಗುವಂತೆ ನೋಡಿಕೊಳ್ಳಬೇಕು.

ಮಾನವ ಸ್ಥಾನ ಜಗತ್ತಿನ ಜೀವಕೋಟಿಯಲ್ಲಿ ಅತ್ಯುನ್ನತವಾದುದು; ಶ್ರೇಷ್ಠವಾದುದು, ಕಾಲ, ದೇಶ, ಸನ್ನಿವೇಶ, ಸಂದರ್ಭಗಳನ್ನು ಅರ್ಥಮಾಡಿಕೊಂಡು ಕಾಲವನ್ನು ಸದುಪಯೋಗ ಮಾಡಿಕೊಳ್ಳಬೇಕು.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬರೆಯೆಂದೆ ಬರೆಯೆಂದೆ ಏನ ಬರೆಯಲಿ ತಂದೆ
ನಿನ್ನ ಪಾವನ ಚರಿತೆ ಹೊರತಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬರೆವುದಕೆ ನಾನಾರು ನೀನೆ ಬರೆಸುತಲಿರುವೆ
ಮರೆವೆಗೊಳಗಾಗದ ಪರಿಯೊಳಗೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವು ತೃಷೆ ನಿದ್ದೆಗಳ ಹಸನಾಗಿ ಗೆದ್ದಿರುವ
ವಿಷಯ ವ್ಯಸನ ಮುಕ್ತ ಶಿವಶಿಖರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನೆಂದು ಹೇಳಲಿ ಎಂತೆಂದು ಚಿಂತಿಸಲಿ
ಯಾವ ಬಗೆಯಿಂದ ತವಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಡಲಿಲ್ಲದ ಒಡೆಯ ಬಿಡುಗಣ್ಣಿನ ಬೆಡಗ
ಜಡವ ಜಂಗಮಗೊಳಿಪ ಸಿರಿಶರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕದಳಿಯ ನಿರುತ ಲೋಕಸೇವೆಗೆ ಮುಡುಪಿ
ಮಾಯಪ್ರಪಂಚವ ತಿಳಿಗೊಳಿಪ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾನು ಮಾಡಿದೆನೆಂಬ ಭಾವಸೂತಕವಿರದ
ಭೂಮಿತಾಯಿ ಹಡೆದ ತ್ಯಾಗನಿಧಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕ ದಾಸೋಹ ದೇಹದೇಹಿಗಳಾಗಿ
ಜಗದಾತ್ಮರಾಮಕೆ ತುಡಿದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕುಲತಿಲಕ ಶಿವಯೋಗಿ ಶಿವಕುಲ ಚಿಂತಾಮಣಿ
ಶಿವಲೋಕ ಶಿವಶಿಲ್ಪಿ ಶಿವಘನವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೀರ್ತಿವಾರ್ತೆಗಾಗಿ ಲೋಕಧಾವಿಸುತಿಹುದ
ಶಾಂತರ್ಕ್ಯನಾಗಿ ನೋಡುತಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಹೂವು ಜೀವನ

-ಗೊ.ರು. ಚನ್ನಬಸಪ್ಪ *

ಓ ಮಲ್ಲಿಗೆ ಕಾಕಡ, ನೀನು ಬಹಳ ಪಾಕಡ
ಕಣ್ಣು ಬಿಟ್ಟೆ ಗಡಗಡ; ಕೆಳಗೆ ಬಿದ್ದೆ ಬಡಬಡ !
ಒಂದೇ ದಿನದ ಜೀವನ, ಅದರೂನು ಪಾವನ
ನನ್ನ ಮನೆಯ ನಂದನ; ನಿನಗೆ ನನ್ನ ವಂದನ !

ಇದು ನಾಡಿನ ಪ್ರಸಿದ್ಧ ಕವಿ ಹಿಮಾನಾ ಅವರ 'ಅಮೃತಧಾರೆ' ಎಂಬ ಕವನ ಸಂಕಲನದಲ್ಲಿರುವ ಒಂದು ಕಿರುಕವನ. ಆಕಾರದಲ್ಲಿ ಕಿರಿದೆನಿಸಿದರೂ ಅರ್ಥದಲ್ಲಿ ಹಿರಿದು.

ಎಂಥ ಸುಂದರ ಚಿತ್ರಣ! ಹೂವಿನ ಸಾವನ್ನೇನೋ ಕಂಡಿದ್ದೇವೆ ನಾವು. ಆದರೆ ಹುಟ್ಟನ್ನೂ ಕಂಡಿರುವ ಕವಿಯ ಸೂಕ್ಷ್ಮ ದೃಷ್ಟಿಯನ್ನು ನೋಡಿ! ಕಾದು ಕುಳಿತರೂ ದೊರೆಯದ ದೃಶ್ಯ. ಕವಿಯ ನೆರವಿನಿಂದ ಅನಾಯಾಸ.

ನಾಲ್ಕು ಸಾಲಿನ ಈ ಕವನ ಪಾವನ; ಜೀವನದ ಸಂದೇಶ ಹೊತ್ತು ನಿಂತಿದೆ. ಮಾನವನ ಬದುಕಿಗೆ ದಾರಿಯ ಬುತ್ತಿಯಾಗಿದೆ.

ಮನೆಯ ಮುಂದೊಂದು ಚಿಕ್ಕ ಹೂವಿನ ಗಿಡ. ಇರುವಷ್ಟು ಸ್ಥಳದಲ್ಲೇ ಬೆಳೆದ ಗಿಡ. ಅದೇ ಕವಿಗೆ ನಂದನ! ಗಿಡದ ಹೂ ಬಿಡುವಾಗ ಗುಡಿಬಿಡಿಯೇನೂ ಇಲ್ಲ. 'ಮೌನದಿಂ ಬಿರಿ'ಯುವ ಕ್ರಿಯೆ. ಆದರೂ 'ಗಡಗಡ ಕಣ್ಣು ಬಿಟ್ಟವೆ'ಯಂತೆ ಅದು ! 'ಬಡಬಡ' ಕೆಳಗೆ ಬಿದ್ದಿದೆಯಂತೆ ಲೋಕಸೇವೆಗಾಗಿ. ಅವಸರದ ಆಗಮನ; ಕರ್ತವ್ಯ ಮುಗಿದ ಮೇಲೆ ನಿಶ್ಚಿಂತೆಯ ನಿರ್ಗಮನ. ಎಂತಹ ಅರ್ಥಪೂರ್ಣ ಜೀವನ!

'ಗಡಗಡ ಕಣ್ಣು ಬಿಟ್ಟು ಬಡಬಡ ಬಿದ್ದು' ಹೋಗುವ ಮಧ್ಯೆ ಹೂವು ಸಲ್ಲಿಸಿದ ಸೇವೆ ಪವಿತ್ರ ; ಪಾವನ.

ಹೂವು ಯಾವುದಕ್ಕೆ ಬೇಡ ? ಮುಂಜಾನೆಯ ಪೂಜೆ ಯಿರಲಿ, ಸಂಜೆಯ ಶೃಂಗಾರವಿರಲಿ, ಮದುವೆಯ ಅಲಂಕಾರ ವಿರಲಿ, ಮಸಣದ ಸಂಸ್ಕಾರವಿರಲಿ, ಹೂವು ಬೇಕು. ಆದರೂ ಅದಕ್ಕೆ ಅರಳಿದ ಹಮ್ಮಿಲ್ಲ; ಉದುರಿದ ದುಮ್ಮಾನವಿಲ್ಲ. ತನಗೆ ತಾನೇ ಅರಳುತ್ತದೆ– ಯಾವ ಜಾಹಿರಾತೂ ಇಲ್ಲದೆ. ಮುಡಿವ ರಸಿಕರಿದ್ದರೆ ಸಂತೋಷ. ಇಲ್ಲದಿದ್ದರೆ ದುಃಖವೇನಿಲ್ಲ.

ಹೂವು ಎಲ್ಲಿದ್ದರೂ ಸೊಗಸು. ಗಿಡದ ಮೇಲಿದ್ದರೆ ಕವಿಗೆ ಸುಂದರ. ಜಡೆಯ ಮೇಲಿದ್ದರೆ ಪ್ರೇಮಿಗೆ ಸುಂದರ. ಗುಡಿಯ ವಿಗ್ರಹದ ಮೇಲಿದ್ದರೆ ಅರ್ಚಕನಿಗೆ ಸುಂದರ. ಶಿಷ್ಯ ಗುರುವಿನ ಪಾದಕ್ಕೆ ಇಟ್ಟಾಗ ಅದು ಪೂಜೆಯಾಗುತ್ತೆ. ಅದೇ ಹೂವನ್ನು ಗುರು ಶಿಷ್ಯನಿಗೆ ಕೊಟ್ಟಾಗ ಪ್ರಸಾದವಾಗುತ್ತದೆ.

ಮಗುವನ್ನು ಹೂವಿಗೆ ಹೋಲಿಸುವುದುಂಟು. 'ಮಕ್ಕಳು ಮಾನವ ಲೋಕದ ಸುಂದರ ಪುಷ್ಪಗಳು' ಎನ್ನುತ್ತಾರೆ ಕವಿ ರವೀಂದ್ರರು. ಹೆಣ್ಣು ಮತ್ತು ಮನಸ್ಸನ್ನು ಹೂವಿಗೆ ಹೋಲಿಸುತ್ತೇವೆ. ಒಳ್ಳೆಯವರನ್ನು ಕಂಡು ಅವರದು ಹೂವಿನಂತಹ ಮನಸ್ಸು ಎನ್ನುತ್ತೇವೆ. ಎಷ್ಟೋ ಜನ ಭಾವುಕರು ಹೂವನ್ನು ಹಿಡಿದುಕೊಂಡು ಹೆಣ್ಣಿನೊಡನೆ ಮಾತನಾಡಿದ್ದುಂಟು!

ಹೂವು ಕಂಡು ಹಿಗ್ಗದ ಮನಸ್ಸಿಲ್ಲ. ಹಿಗ್ಗದಿದ್ದರೆ ಅವನು ಮನುಷ್ಯನೇ ಅಲ್ಲ. ಸೌಂದರ್ಯ ಪ್ರಜ್ಞೆಯುಳ್ಳ ವ್ಯಕ್ತಿಯ ಮುಖ ಅರಳಿದ ಹೂವು ಕಂಡಾಗ ಪ್ರಫುಲ್ಲವಾಗುತ್ತದೆ. ಅರಳಿದ ಹೂವು ಅವನ ದೃಷ್ಟಿಯಲ್ಲಿ ದೇವರ ಮುಗುಳ್ನಗೆ! ಅದಕ್ಕೆ ತಾನೂ ಮುಗುಳ್ನಗೆಯ ಮಾರುತ್ತರ ಕೊಡುತ್ತಾನೆ. ಈ ವಿನಿಮಯದ ಅನುಭವ ಅಸಾಮಾನ್ಯ, ಅನಿರ್ವಚನೀಯ!

ಈ ನೆಲೆಯಲ್ಲಿ ನಿಂತು, ತುಂಬಿ ನಗುವ ಹೂವನ್ನು ಕಿತ್ತು, ಕಲ್ಲುದೇವರ ಪೂಜೆಗೆ ಒಯ್ಯಲು ಹೋದ ಪೂಜಾರಿಯೊಬ್ಬನನ್ನು ಕುರಿತು ಮಹಾಕವಿ ಕುವೆಂಪು ಒಂದು ಮಾತು ಹೇಳುತ್ತಾರೆ ;

*'ಓ ಪೂಜಾರಿ, ಬಿಡೋ ಅಲ್ಲಿರಲಿ ಆ ಹೂವು*
*ನೀ ಸೃಷ್ಟಿಸಲಾರದ ಚೆಲುವಿಗೆ ನಿನ್ನಿಂದೇತಕೆ ಸಾವು?'*

ಬಹುಶಃ ಇಂದಿನ ಪ್ಲಾಸ್ಟಿಕ್ ಯುಗದಲ್ಲಿ ಹೂವನ್ನು ಸೃಷ್ಟಿಸಬಹುದೇನೋ! ಆದರೆ ಕವಿ ಕೇಳುವ ಚೆಲುವನ್ನು ಅದಕ್ಕೆ ಕೊಡಲಾದೀತೆ? ಚೆಲುವಿರುವುದು ಕೇವಲ ಆಕೃತಿಯಲ್ಲಲ್ಲ; ಅಂತರಂಗದಲ್ಲಿ ಪ್ಲಾಸ್ಟಿಕ್ ಹೂವು ಎಷ್ಟೇ ಹೋಲಬಹುದಾದರೂ ಅದಕ್ಕೆ ಸುಗಂಧ ತುಂಬಲಾದೀತೇ?

ಪ್ಲಾಸ್ಟಿಕ್ ಹೂ ಬಾಡದಿರಬಹುದು. ಆದರೆ ಸಹಜ ವಾಸನೆ ಬೀರದೆ ಎಷ್ಟು ದಿನ ಇದ್ದರೇನು? ಹೂವಿನ ಮಾತು ಹಾಗಲ್ಲ. ಒಂದೇ ದಿನವಾದರೂ ಅದರದು ಲೇಸೆನಿಸಿಕೊಂಡ ಬದುಕು. ಅದಕ್ಕೆ ಅದು ಪಾವನ!

ಗಿಡದಲ್ಲಿದ್ದು ಸೌಂದರ್ಯ ಸೂಸಿ, ಗುಡಿಗೆ ಬಂದರೆ ಪ್ರಸಾದವಾಗಿ, ಜಡೆಯನೇರಿದರೆ ಶೃಂಗಾರವಾಗಿ, ಕಡೆಯಲ್ಲಿ ಅಡಿಗೆ ಬಿದ್ದರೆ ಕಸವಾಗುತ್ತದೆ; ಮತ್ತೆ ಇನ್ನೊಂದು ಹೂವಿನ ಗಿಡಕ್ಕೆ ಗೊಬ್ಬರವಾಗುತ್ತದೆ. ಇದ್ದರೂ ಸಲ್ಲುವ, ಬಿದ್ದರೂ ಸಲ್ಲುವ ಸೊಮ್ಮು ಅರಳಿ ಉದುರುವವರೆಗೂ ಅದರ ಬದುಕು ಸೌಮ್ಯ, ರಮ್ಯ, ಗಮ್ಯ.

ಹೂವು ಸಜ್ಜನಿಕೆ, ಶುಭ್ರತೆಯ ಪ್ರತೀಕ. ಅದರ ಜೀವನ ಸಾರ್ಥಕ. ಆಯಸ್ಸೇನೂ ಅಲ್ಲ; ಶ್ರೇಯಸ್ಸು ಮಾತ್ರ ಕಲ್ಪ!

ಇಂತಹ ಹೂವಿನ ಬಗ್ಗೆ ಹಿಮಾನಾ ಬರೆದ ಕವನ ಹೂವಿನಷ್ಟೇ ಸುಂದರ. ಆ ಕವನ ಓದಿದ ಮೇಲೆ ಈ ಕೈಗೂ ಸ್ಫೂರ್ತಿ.

*ಎಂಥ ಸೂಕ್ಷ್ಮ ದರ್ಶನ, ಏನು ಭವ್ಯಭಾವನ*
*ಸ್ವಾನುಭಾವಿ ಹಿಮಾನಾ, ನಿಮಗಿದೋ ವಂದನ!.*

* ನಂ. 406, ಪ್ರಣಾಮ, ಎಸ್. ರಸ್ತೆ, 3ನೇ ಕ್ರಾಸ್, ಐಡಿಯಲ್ ಹೋಮ್ಸ್ ಟೌನ್‌ಶಿಪ್, ರಾಜರಾಜೇಶ್ವರಿನಗರ, ಬೆಂಗಳೂರು.

## ಅತೃಪ್ತಿ

-ಡಾ॥ ಸಿ.ಪಿ. ಕೃಷ್ಣಕುಮಾರ್*

ಮನುಷ್ಯನ ಆಸೆಗೆ ಎಲ್ಲೆಯಿಲ್ಲ; ಎಷ್ಟು ಸಿಕ್ಕಿದರೂ ಅವನಿಗೆ ತೃಪ್ತಿಯಿಲ್ಲ. ಈ ಪ್ರವೃತ್ತಿಯನ್ನು ದಾಸರು 'ಇಷ್ಟು ಸಿಕ್ಕಿದರೆ ಮತ್ತಷ್ಟು ಬೇಕೆಂಬಾಸೆ' ಎಂದು ವಿಡಂಬಿಸಿದ್ದಾರೆ. ಮಾನವ ಅಲ್ಪಸಂತೃಪ್ತನಾಗಿರಬೇಕು. ಯಾವುದೋ ಮಿತಿ ಯಾಚೆಗೆ ತನ್ನ ಆಸೆಯನ್ನು ಬೆಳೆಸಬಾರದು ಎಂಬುದು ಇದರ ತಾತ್ಪರ್ಯ.

ಆದರೆ ಮಹಾಭಾರತದಲ್ಲಿ ಒಂದು ಮಾತು ಬರುತ್ತದೆ. 'ಅಸಂತೋಷಃ ಶ್ರಿಯೋ ಮೂಲಃ' (ಅಸಂತುಷ್ಟಿಯೆ ಸಂಪತ್ತಿಗೆ ಕಾರಣ). ಇದು ಸ್ವೀಕಾರ್ಯವಲ್ಲದ ಹೇಳಿಕೆಯೆ? ಹಾಗೇನೂ ಅಲ್ಲ. ಯಾವ ವಿಷಯದಲ್ಲಿ ತೃಪ್ತಿ ಬೇಕು, ಯಾವ ವಿಷಯದಲ್ಲಿ ಅತೃಪ್ತಿಯಿರಬೇಕು ಎಂಬುದನ್ನು ನಾವು ಸ್ಪಷ್ಟಪಡಿಸಿಕೊಳ್ಳಬೇಕಷ್ಟೆ.

ಯಾವ ವ್ಯಕ್ತಿಯೇ ಆಗಲಿ ಹಸಿದುಕೊಂಡು, ಬೆತ್ತಲೆ ಯಾಗಿರುವುದು ಸಾಧ್ಯವಿಲ್ಲ; ಹೊಟ್ಟೆ, ಬಟ್ಟೆಗಳಿಗಾಗಿ ಅವನು ಅಷ್ಟಿಷ್ಟು ಸಂಪಾದಿಸಲೇಬೇಕು. ಈ ಮೂಲಭೂತ ಅವಶ್ಯಕತೆ ಗಳನ್ನು ಮೀರಿಯೂ ಕೆಲವು ಅಗತ್ಯಗಳಿರುತ್ತವೆ; ಅವುಗಳನ್ನೂ ಪೂರೈಸಬೇಕಾಗುತ್ತದೆ. ಎಂದರೆ, ಅವರವರ ಅಗತ್ಯಗಳಿಗೆ ತಕ್ಕಂತೆ ಕನಿಷ್ಠ ಪ್ರಮಾಣದ ಸಂಪತ್ತು ಎಲ್ಲರಿಗೂ ಬೇಕು; ಅದನ್ನವರು ಅರ್ಜಿಸದೆ ಕೈಕಟ್ಟಿಕೊಂಡು ಕುಳಿತಿರ ಬಾರದು. ಆ ಒಂದು ಹಂತವನ್ನು ಮುಟ್ಟುವವರೆಗೆ ಅವರಲ್ಲಿ ಅಸಂತುಷ್ಟಿಯಿರಬೇಕು; ಮುಟ್ಟಿದಮೇಲೆ ಅವರು ಸಂತುಷ್ಟ ರಾಗಬೇಕು. ಇಲ್ಲವಾದರೆ, ಅಸಂತೃಪ್ತಿ ಅಸುಖಕ್ಕೆ ದಾರಿಮಾಡಿ ಕೊಟ್ಟೀತು.

ಇದು ಲೌಕಿಕ ಸುಖ ಸಂಪದಗಳ ಬಗೆಗೆ ಹೇಳಬಹು ದಾದ ಮಾತು. ಆಧ್ಯಾತ್ಮಿಕ ಸಾಧನೆ, ಜ್ಞಾನಾರ್ಜನೆ, ಸಾಹಿತ್ಯ ಸೃಷ್ಟಿ ಮುಂತಾದ ವಿಷಯಗಳಿಗೆ ಇದು ಅನ್ವಯಿಸದು. ಆ ಕ್ಷೇತ್ರಗಳಲ್ಲಿ ಸಂತುಷ್ಟಿ ಸಲ್ಲದು; ವ್ಯಕ್ತಿ ಸದಾ ಅಸಂತೃಪ್ತನಾಗಿ ಮುಂದೆ ಮುಂದೆ ಹೋಗುತ್ತಿರಬೇಕು. ಅಲ್ಲಿ ಸಾಧನೆಗೆ ಅಂತ್ಯವೆಂಬುದಿಲ್ಲ ; ಸಿದ್ಧಿಯೂ ನಿರ್ದಿಗಂತವಾದದ್ದೇ. ಆದ್ದರಿಂದ, ಈಗ ಸಾಧಿಸಿದ್ದು ಸಾಲದು ಎಂಬ ಅಸಮಾಧಾನ, ಇನ್ನೂ ಮಿಗಿಲಾದುದನ್ನು ಸಾಧಿಸಬೇಕು ಎಂಬ ಚಲ ಅಲ್ಲಿ ಶ್ರೇಯಸ್ಕರ.

ವ್ಯವಹಾರಿಕ ರಂಗದಲ್ಲಿ ಕೂಡ, ಸಂತೃಪ್ತಿಯೆನ್ನುವುದು ಸೋಮಾರಿತನಕ್ಕೆ ಇನ್ನೊಂದು ಹೆಸರಾಗಬಾರದು. ಆದರೆ ಅದು ದುರ್ಯೋಧನನ ದುರಾಶೆಗೆ ಪರ್ಯಾಯವೂ ಆಗಬಾರದು. (ಪೂರ್ವೋಕ್ತ ಮಹಾಭಾರತದ ಹೇಳಿಕೆ ದುರ್ಯೋಧನನ ಬಾಯಲ್ಲಿ ಬಂದಿದೆಯೆಂಬುದು ಗಮನಾರ್ಹ) ಹೀಗೂ ಹೇಳಬಹುದು; ವ್ಯಕ್ತಿಯ ಪ್ರಗತಿಗೆ ಸಂಬಂಧಿಸಿದಂತೆ ಅಸಂತೋಷ ಅತಿಯಾಗಬಾರದು; ಆದರೆ ಸಮಾಜದ, ದೇಶದ ಅಭ್ಯುದಯಕ್ಕೆ ಸಂಬಂಧಿಸಿದಂತೆ ಅಸಂತೋಷ ಎಷ್ಟಿದ್ದರೆ ಅಷ್ಟೂ ಒಳ್ಳೆಯದು. ಒಟ್ಟಿನಲ್ಲಿ, ಅತೃಪ್ತಿ ಜೀವಂತಿಕೆಯ ಲಕ್ಷಣವೆಂಬುದರಲ್ಲಿ ಸಂಶಯವಿಲ್ಲ; ಹಾಗೆಯೆ ಸಂತೃಪ್ತಿ ಜಡತೆಯ ಲಕ್ಷಣವಾಗುವ ಸಂಭವವುಂಟು. ❑

### ಶ್ರೀವಾಣಿ

ಮನಸ್ಸು ಪವಿತ್ರವಾದುದು. ಅದನ್ನು ಜೋಪಾನ ಮಾಡಿಕೊಳ್ಳುವ ಕರ್ತವ್ಯ ನಮ್ಮದು. ಅದು ಚಂಚಲವಾಗ ದಂತೆ, ಅನ್ಯವಿಷಯಗಳತ್ತ ಹರಿದುಹೋಗದಂತೆ, ದೀಪದ ಕುಡಿಯಂತೆ ಅಲುಗಾಡದಂತೆ, ಯಾವಾಗಲೂ ಎಚ್ಚರ ವಾಗಿದ್ದು ಕಾಪಾಡಿಕೊಳ್ಳಬೇಕು. ಮನಸ್ಸನ್ನು ಕುರಿತು ಜ್ಞಾನಿಗಳು ಬಹಳ ಚಿಂತನೆ ಮಾಡಿದ್ದಾರೆ. ಬಹುವಾಗಿ ಹೇಳಿದ್ದಾರೆ. ಮಂಗನಂತೆ ವರ್ತಿಸುವ ಮನಸ್ಸನ್ನು ಒಂದು ಕಡೆ ನಿಲ್ಲಿಸಬೇಕಾದರೆ ಪ್ರಯತ್ನ ಮಾಡಬೇಕು. ಒಮ್ಮೆಯಲ್ಲ ಹತ್ತಾರು ಸಾರಿ, ನೂರಾರು ಬಾರಿ ಮಾಡಬೇಕು.

* ನಂ. 2265/19, 6ನೇ ಕ್ರಾಸ್, 2ನೇ ಮೈನ್, ವಿನಾಯಕನಗರ, ಮೈಸೂರು -570 012.







## ಬಸವಣ್ಣನವರ ವಚನಗಳಲ್ಲಿ ಆರ್ಥಿಕ ಚಿಂತನೆಗಳು

-ಡಾ॥ ರಾಜಶೇಖರ ಜಮದಂಡಿ*




ಬಸವಣ್ಣನವರ ಆರ್ಥಿಕ ಆರ್ಥಿಕ ವಿಚಾರಗಳು ಎಂದೆಂದಿಗೂ ಪ್ರಸ್ತುತವೇ. ಇವರು ರೂಪಿಸಿದ ಆರ್ಥಿಕ ತಳಹದಿಯ ಮೇಲಿನ ಬದುಕು ಇಂದಿನ ಅರ್ಥಶಾಸ್ತ್ರಜ್ಞರೂ ಮಾನ್ಯ ಮಾಡುವಂತಿದೆ. ಸಮಾಜ ಭದ್ರವಾಗಿರಬೇಕಾದರೆ ಆರ್ಥಿಕ ಸಮಾನತೆಯೆಂಬುದು ಸರಿಯಾಗಿರಬೇಕು. ಅಂದರೆ ಎಲ್ಲರೂ ಸಮಾನವಾದ ಆದಾಯ-ಖರ್ಚುಗಳನ್ನು ಸರಿ ದೂಗಿಸಿಕೊಂಡು ಹೋಗುವುದು ಕಷ್ಟಸಾಧ್ಯ. ಅವರವರ ಪ್ರಾಮಾಣಿಕತೆಯಿಂದ ಕಾಯಕವನ್ನು ಮಾಡುತ್ತಾ, ಅಗತ್ಯತೆಗಳನ್ನು ಪೂರೈಸಿಕೊಳ್ಳುವುದರೊಂದಿಗೆ ಪ್ರತ್ಯಕ್ಷ-ಪರೋಕ್ಷವಾಗಿ ಸಮಾಜಕ್ಕೆ ಸ್ಪಂದಿಸಬೇಕೆಂಬುದೇ ಬಸವಣ್ಣನವರ ಪ್ರತಿಪಾದನೆಯಾಗಿತ್ತು.

ಬಸವಣ್ಣನವರು ಆರ್ಥಿಕ ಸಮಸ್ಯೆಗಳ ಬಗ್ಗೆ ಚಿಂತನೆ ಮಾಡಲು ಸಾಕಷ್ಟು ಆಡಳಿತಾನುಭವವನ್ನು ಪಡೆದಿದ್ದರು. ಅವರು ಬಹಳ ಚಿಕ್ಕ ವಯಸ್ಸಿನಲ್ಲಿ ಬಿಜ್ಜಳನ ಆಡಳಿತದಲ್ಲಿ ಭಂಡಾರದ ಕರಣಿಕರಾಗಿ ನಂತರ ಕಲ್ಯಾಣದಲ್ಲಿ ಮಂತ್ರಿಯಾಗಿ ಬಹುದೊಡ್ಡ ಜವಾಬ್ದಾರಿಯನ್ನು ವಹಿಸಿಕೊಂಡವರು. ಭಂಡಾರದ ಮುಖ್ಯಸ್ಥರಾಗಿದ್ದರಿಂದ ಸಮಾಜದ ಜನರ ಆರ್ಥಿಕ ಪರಿಸ್ಥಿತಿಯ ಬಗೆಗೂ ಅವರು ಚಿಂತನೆ ಮಾಡು ತ್ತಿದ್ದರು. ಬಸವಣ್ಣನವರ ಆರ್ಥಿಕ ಚಿಂತನೆಗಳನ್ನು ಅವರ ಧಾರ್ಮಿಕ ಮತ್ತು ಸಾಮಾಜಿಕ ಚಿಂತನೆಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಇವರ ಕಾಲದಲ್ಲಿದ್ದ ಹೆಚ್ಚಿನ ಜನರ ಕುಲಕಸುಬು ವ್ಯವಸಾಯವಾಗಿತ್ತು. ಆರ್ಥಿಕ ಪರಿಸ್ಥಿತಿ ಅಷ್ಟೇನೂ ಹೇಳಿಕೊಳ್ಳುವಂಥಾದಾಗಿದ್ದಿಲ್ಲ. ಅನೇಕ ಶತಮಾನ ಗಳವರೆಗೆ ನಡೆದುಬಂದ ಮೂಲ ಪಾರಂಪರಿಕ ವೃತ್ತಿಗಳಾದ ಕಮ್ಮಾರಿಕೆ, ಚಮ್ಮಾರಿಕೆ, ನೇಕಾರಿಕೆ, ಕುಂಬಾರಿಕೆ ಮುಂತಾದವು ಗಳಿಂದ ಮಾತ್ರ ಆರ್ಥಿಕ ಸಮಸ್ಯೆಗೆ ಪರಿಹಾರ ಕಂಡುಕೊಳ್ಳ ಬೇಕಾಗುತ್ತಿತ್ತು. ಇಂತಹ ಸಂಕಷ್ಟ ಆರ್ಥಿಕ ಪರಿಸ್ಥಿತಿಯಲ್ಲಿ ಬಸವಣ್ಣನವರು ಬದಲಾವಣೆಗಳನ್ನು ತರಲು ಪ್ರಯತ್ನಿಸಿದರು.

ಇನ್ನು ಪ್ರತಿಯೊಬ್ಬರ ಜೀವನ ಮಟ್ಟ ಸುಧಾರಣೆಯಾಗ ಬೇಕಾದರೆ ಅವರವರ ಆರ್ಥಿಕ ಮಟ್ಟ ಚೆನ್ನಾಗಿರ ಬೇಕಾಗುತ್ತದೆ. ಇದಕ್ಕೆ ಧನ ಸಂಗ್ರಹವು ಬದುಕಿನ ಅವಿಭಾಜ್ಯ ಅಂಗ ವಾಗಿರುತ್ತದೆ. ಪ್ರತಿಯೊಬ್ಬರೂ ನಾನಾ ವ್ಯವಹಾರ ಗಳಿಂದ ಹಣ ಸಂಗ್ರಹಣೆಗಾಗಿ ದಿನವೂ ಹೋರಾಟ ಮಾಡಲೇಬೇಕು. 'ಹಣವಿಲ್ಲದವನು ಹೆಣಕ್ಕಿಂತ ಕಡೆ', ಎಂಬಂತಾಗಿದೆ. ಯಾವ ಕಾರ್ಯಕ್ಕೆ ಆಗಲಿ ಹಣ ಬೇಕೇ ಬೇಕು. ಹಣವಿಲ್ಲದೆ ಬಾಳ ರಥ ಚಲಿಸದು. ಸಮಾಜಾಭಿ ವೃದ್ಧಿಯೂ ಸಹ ಆಗದು. **'ಆವ ನೇಮವಾದರೇ, ಹೇಮವಿಲ್ಲದಂಗೈಸಬಹುದೆ?'** ಎಂಬುದು ಬಸವಣ್ಣನವರ ಪ್ರಶ್ನೆ. ಮಾನವನಿಗೆ ಸಾಮಾನ್ಯವಾಗಿ 'ಧನದಾಸೆ ಬಿಡದೂ' ಎಂದಿದ್ದಾರೆ. ಅತ್ಯುತ್ತಮ ವಿನಿಮಯಕ್ಕೆ ಮಧ್ಯಮವೆನಿಸಿದ (Medium of exchange) ಹಣ ಮಾನವನ ಶ್ರೇಷ್ಠ ಆವಿಷ್ಕಾರಗಳಲ್ಲೊಂದು. ಬದುಕಿನಲ್ಲಿ ಹಣದ ಪಾತ್ರ ಗಣನೀಯವಾಗಿದೆ. ಅದು 'ಕೊಳ್ಳುವ ಶಕ್ತಿ' (Purchasing of power) ಪಡೆದು ಕೊಂಡಿದೆ. ಆದರೂ ಇದಕ್ಕೆ

* ಅಧ್ಯಾಪಕರು, ಜೆ.ಎಸ್.ಎಸ್ ಸ್ನಾತಕೋತ್ತರ ಕೇಂದ್ರ, ಚಾಮರಾಜನಗರ-೫೭೧ ೩೧೩.

ಇತಿ–ಮಿತಿಗಳಿವೆ. ಓರ್ವ ಅರ್ಥಶಾಸ್ತ್ರಜ್ಞ ಹೇಳುವಂತೆ **'ಹಣಕ್ಕೆಷ್ಟು ಅವಕಾಶ ಕೊಡಬೇಕೋ ಅದನ್ನು ನಾವು ನಿರ್ಧರಿಸಿಕೊಳ್ಳಬೇಕು. ಅದೇ ಜೀವನದ ಸರ್ವಸ್ವವಲ್ಲ'** ಹಣಕ್ಕೆ ಗುಲಾಮರಾದರೆ ನಮ್ಮ ಶಕ್ತಿ ಕುಂದುತ್ತದೆ. (Do you control your money control you) ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಹಣ ಜೀವನದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಂಡು 'ಬದುಕಿಗಾಗಿ ಹಣ' ಎಂಬ ಮಾತನ್ನು ಸುಳ್ಳಾಗಿಸಿ 'ಹಣಕ್ಕಾಗಿ ಬದುಕು' ಎಂಬ ಮಾರ್ಗ ಸೃಷ್ಟಿಯಾಗಿದೆ. ಅರ್ಥಶಾಸ್ತ್ರಜ್ಞರಾದ ಆ್ಯಡಂ ಸ್ಮಿಥ್‌ರು **'ಅರ್ಥಶಾಸ್ತ್ರವು ನೈತಿಕತೆಯ ಪಾತಳಿಯ ಮೇಲೆ ನಿಲ್ಲಬೇಕು ಮತ್ತು ಮಾನವ ಸಹಜವಾಗಿಯೇ ಸ್ವಾತಂತ್ರ್ಯ ಅನುಭವಿಸಬೇಕು'** ಎಂಬ ಅವರ ಮಾತನ್ನು ೧೨ನೇ ಶತಮಾನದಲ್ಲಿ ಬಸವಣ್ಣನವರು ಕಾರ್ಯರೂಪಕ್ಕೆ ತಂದು ಆರ್ಥಿಕ ಹಂಚಿಕೆಯ ಹಿನ್ನಲೆಯಲ್ಲಿ ಕಾಯಕ–ದಾಸೋಹವೆಂಬ ಸೈದ್ಧಾಂತಿಕತೆಯ ನೆಲೆಗಟ್ಟನ್ನು ಕಂಡುಕೊಂಡಿದ್ದರು. ಸಮಾಜದ ಸರ್ವತೋಮುಖ ಬೆಳವಣಿಗೆಗೆ, ಶೋಷಣೆರಹಿತ ಬದುಕಿಗೆ, ಸರಳ ಸೂತ್ರಗಳನ್ನು ಬೋಧಿಸಿದರು. ಇಂದಿನಂತೆ ಅಂದಿನ ವ್ಯವಹಾರ ಚತುರರೂ ಸಹ, ಗಳಿಸಿದ ಸಂಪತ್ತನ್ನು ಕ್ರೋಡೀಕರಿಸುತ್ತಿದ್ದುಂಟು. ರಾಜಕೀಯ ಪ್ರೇರಿತರಾಗಿ ಹೊಗಳುಭಟರಾಗಿ, ಆಡಳಿತದ ಮೇಲೆ ಹಿಡಿತ ಸಾಧಿಸಿದ ಕೆಲವರು ದುರ್ಬಲರ ಶೋಷಣೆ, ಕಪ್ಪುಹಣ, ಅಕ್ರಮ ವ್ಯವಹಾರ ಪ್ರಯತ್ನಗಳಿಂದ ಲಾಭ ಹೆಚ್ಚಿಸಿಕೊಳ್ಳುತ್ತಾ ಆರ್ಥಿಕ ವ್ಯವಸ್ಥೆಯನ್ನೇ ಮಲಿನಗೊಳಿಸುತ್ತಿದ್ದರು. ಇದರಿಂದ ಸಮಾಜಾಭಿವೃದ್ಧಿಯಲ್ಲಿ ಅಸಮತೋಲನ, ನಿರುದ್ಯೋಗ, ಪರಿಸರ ಮಾಲಿನ್ಯ, ಬಡತನ ಮುಂತಾದ ಸಮಸ್ಯೆಗಳು ಉದ್ಭವಿಸಿ ಆರ್ಥಿಕ ಕ್ಷೇತ್ರವು ಅಸಮರ್ಪಕವಾಗಿದ್ದಿತ್ತು.

ಸಂಪತ್ತಿನ ಸಂಗ್ರಹಣೆ ಬೆಳೆದಂತೆಲ್ಲ ಮನುಷ್ಯರಲ್ಲಿ ಸಂಸ್ಕಾರವು ವಿಕಾರವಾಗುತ್ತದೆ. ೧೨ನೇ ಶತಮಾನದಲ್ಲಿ ಕಲ್ಯಾಣವು ಮಸಣವಾಗುತ್ತಾ ಸಾಗಿತ್ತು. ಬಸವಣ್ಣನವರ ಕಾಯಕದ ಮಹತ್ವ ಮತ್ತು ಸಂಪತ್ತಿನ ಹಂಚಿಕೆಯನ್ನು ದಾಸೋಹದ ಮೂಲಕ ಅನೇಕ ಶರಣರು **'ನ ಭೂತೋ ನ ಭವಿಷ್ಯತಿ'** ಎಂಬಂತೆ ಅರ್ಥಪೂರ್ಣವಾಗಿ ಜೀವನದುದ್ದಕ್ಕೂ ಅಳವಡಿಸಿಕೊಂಡಿದ್ದರು.

ಬಡವ ಬಲ್ಲಿದರ ನಡುವಣ ಕಂದರವನ್ನು ತುಂಬುವ ಸಾಹಸಕ್ಕೆ ಬಸವಣ್ಣನವರು ಕೈ ಹಾಕಿದ್ದರು. ಅದು ಪೂರ್ಣಗೊಳ್ಳಬೇಕಿದ್ದರೆ ಮೊದಲು ಶ್ರೀಸಾಮಾನ್ಯನ ಆರ್ಥಿಕ ಪರಿಸ್ಥಿತಿ ಸುಧಾರಿಸಬೇಕು. 'ಉಳ್ಳವರು ಶಿವಾಲಯವ ಮಾಡುವರು ನಾನೇನು ಮಾಡಲಿ ಬಡವನಯ್ಯಾ' ಎಂದು ಬಡವರ ಪರವಾಗಿ ನಿಂತು ಮಾತನಾಡಿದ್ದಾರೆ. ಬಸವಣ್ಣನವರ ದೃಷ್ಟಿಯಲ್ಲಿ ಮುಖ್ಯವಾಗಿ ನಾಲ್ಕು ವಿಚಾರಗಳಿವೆ. ೧. ಜೀವನದ ಗುಣಮಟ್ಟ ಉನ್ನತಿ, ೨. ಅಸಮಾನತೆಯ ನಿವಾರಣೆ, ೩. ಸಾಮಾಜಿಕ ಭದ್ರತೆ, ೪. ದಾಸೋಹ ಪ್ರಕ್ರಿಯೆ.

೮೫೦ ವರ್ಷಗಳ ಹಿಂದಿನ ಬಸವಣ್ಣನವರ ಮಹತ್ವದ ಆರ್ಥಿಕ ಚಿಂತನೆಗಳು ಇಂದಿನವರಿಗಿಂತ ಮಿಗಿಲಾಗಿದ್ದುವೆಂದು, ಪವಾಡ ಸದೃಶವಾಗಿದ್ದವು ಎಂದು ನಿಸ್ಸಂಕೋಚವಾಗಿ ಹೇಳಬಹುದು. ಅಷ್ಟೇ ಅಲ್ಲ, ಅವರು ಜಗತ್ತಿನ ಅಗ್ರಗಣ್ಯ ಸಾಮಾಜಿಕ–ಆರ್ಥಿಕ ದರ್ಶನ ಕಾರರೆಂದೇ ಸ್ಪಷ್ಟಪಡಿಸಬಹುದು. ಪ್ರಸ್ತುತ ಲೇಖನದಲ್ಲಿ ಅವರ ಕೆಲ ಆರ್ಥಿಕ ಚಿಂತನೆಯ ವಿಚಾರಗಳನ್ನು ವಿಶ್ಲೇಷಿಸಲಾಗಿದೆ.

**ಆರ್ಥಿಕ ಸಮಾನತೆಯ ಕೆಲ ವಿಚಾರಗಳು :**

೧. ಸಮಾಜದಲ್ಲಿ ಪ್ರತಿಯೊಬ್ಬರೂ ಯೋಗ್ಯತಾನುಸಾರವಾಗಿ ಕಾಯಕದಲ್ಲಿ ನಿರತನಾಗಬೇಕು. ೨. ಕಾಯಕವು ಯಾವುದೇ ಸಂದರ್ಭದಲ್ಲಿ ವಾಮಮಾರ್ಗ ವಾಗಿರಬಾರದು. ೩. ಅತಿಯಾದ ವ್ಯಾಮೋಹದಿಂದ ಸಂಪತ್ತಿನ ಸಂಗ್ರಹಣೆ ಸಲ್ಲದು. ೪. ಸೋಮಾರಿಗಳಿಗೆ ಕಾಯಕದ ಅರಿವು ಕಡ್ಡಾಯವಾಗಿ ಮಾಡುವುದು. ೫. ಶ್ರೀಮಂತರು–ಬಡವರು, ಮೇಲು–ಕೀಳೆಂಬ ಭಾವನೆ ಕಾಯಕದಲ್ಲಿ ಇರಕೂಡದು. ೬. ಧರ್ಮವನ್ನು ಬಿಟ್ಟು ಅರ್ಥ ಸಂಗ್ರಹಣೆ ಅರ್ಥಹೀನವೇ ಸರಿ. ೭. ಸಾಧನೆ ಮತ್ತು ಗುರಿಯಲ್ಲಿ ಅಧಿಕ 'ಅರ್ಥ'ಗಳಿಕೆಯಿಂದ ದಾಸೋಹಕ್ಕೆ ಮನ್ನಣೆ ನೀಡುವುದು. ೮. ವ್ಯಕ್ತಿಯ ಒಲವು ಅರ್ಥಗಳಿಕೆಯಾದರೂ ಧಾರ್ಮಿಕ– ಸಾಮಾಜಿಕ ಚಿಂತನೆಗಳೂ ಅತ್ಯಗತ್ಯ. ೯. ಇತರರನ್ನು ಬೇಡದೇ ಸ್ವಂತಿಕೆಯಲ್ಲಿ ಗಳಿಕೆ ರೂಢಿಸಿ ಕೊಳ್ಳುವುದು. ೧೦. ಗಳಿಸಿದ ಸಂಪತ್ತನ್ನು ಸುಂಕದ ರೂಪದಲ್ಲಿ ರಾಜ್ಯಕ್ಕೆ ಸಮರ್ಪಿಸುವುದು.

ಸಮಾಜದಲ್ಲಿ ಆರ್ಥಿಕ ಸಮತೋಲನವನ್ನು ಕಾಯ್ದುಕೊಂಡು ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ, ನೆಮ್ಮದಿಯ ಬಾಳಿಗೆ, ಋಜುವಾದ ಸಭ್ಯತೆಯ ಬದುಕಿಗೆ, ತಾನು ಬದುಕಿ, ಅನ್ಯರಿಗೆ ಬದುಕಲು ಕಲ್ಪಿಸಿಕೊಡುವ ಸರ್ವಹಿತಕಾರಿತನಕ್ಕೆ, ಕಾಯಕ–ದಾಸೋಹ ಎಂಬೆರೆಡು ಬಸವಣ್ಣನವರ ಆರ್ಥಿಕ ಸಿದ್ಧಾಂತದ ಮೂಲಗಳಾಗಿವೆ. ಸರ್ವತೋಮುಖ ಅರ್ಥಿಕ ಅಭಿವೃದ್ಧಿ ಸಾಧಿಸಬೇಕಾದರೆ ಬಸವಣ್ಣನವರ ದೃಷ್ಟಿಯಲ್ಲಿ ಕಾಯಕ ಇಹದ ಜೀವನೋಪಾಯ ಮಾರ್ಗವಷ್ಟೇ ಅಲ್ಲ. ಪರದ ಸಿದ್ಧಿಯ ಸಾಧನ ಸ್ವರೂಪವಾಗಿದ್ದಿತು. ವೃತ್ತಿಯೇ ಆಧ್ಯಾತ್ಮಿಕ ಸಾಧನ ವೆಂಬ ಸದ್ಭಾವದಿಂದಾಗಿ, 'ಕಾಯಕ' ಪೂಜನೀಯ ವಾಯಿತು. ಕಾಯಕದಲ್ಲಿ ನಿರತರಾದಾಗ (ಆರ್ಥಿಕ ಜೀವನ ಬಲಗೊಳ್ಳಬೇಕಾದರೆ) 'ಲಿಂಗವನ್ನಾದರೂ ಮರೆಯಬೇಕು, ಜಂಗಮವನ್ನಾದರೂ ಮರೆಯಬೇಕು' ಶರಣ ಆಯ್ದಕ್ಕಿ ಮಾರಯ್ಯನ ಈ ಚಿಂತನೆ ಬಸವಣ್ಣನವರಿಗೆ ದಾರಿದೀಪ ವಾಯಿತು. ಇದರರ್ಥ ಕಾಯಕದಲ್ಲಿ ನಿಷ್ಠೆಯೆಂಬುದು ಬಲಿಯಬೇಕು. ಆಧುನಿಕ ಅರ್ಥ ಶಾಸ್ತ್ರದಲ್ಲಿ ಮಾನವನು ಒಂದು ಉಪಭೋಗಿ ಯಂತ್ರ ಹಾಗೂ ಅವನ ಬೇಡಿಕೆಗಳಿಗೆ ಕೊನೆಯೆಂಬುದಿಲ್ಲ. ಆದರೆ ಬಸವಣ್ಣನವರ ಆರ್ಥಿಕ ವ್ಯವಸ್ಥೆಯಲ್ಲಿ ಮನುಷ್ಯನ ಉಪಯೋಗತ್ವಕ್ಕೆ ಎಡೆಯಿಲ್ಲ. ಜೀವಿಸಲು ಅವಶ್ಯವಾದ ವಸ್ತುಗಳಷ್ಟೇ ಮುಖ್ಯ. ಶರಣರು ಭೋಗ್ಯದಷ್ಟೇ ವೈರಾಗ್ಯವನ್ನು ಒಪ್ಪಿಕೊಂಡಿದ್ದರು. ಅದೇ ರೀತಿ ಆಧುನಿಕ ಅರ್ಥ ಶಾಸ್ತ್ರದಲ್ಲಿ ನೈತಿಕತೆಗೆ ಬೆಲೆಯಿಲ್ಲ. ಅಂದರೆ ಕೇವಲ ಲಾಭ, ಲಂಚ, ಮೋಸಗಳಿಂದ ಒಬ್ಬರೊಬ್ಬರಲ್ಲಿ ಹೋರಾಟದ, ಸ್ವಾರ್ಥದ ಪ್ರವೃತ್ತಿ ಹೆಚ್ಚಾಗಿ ಕಂಡು ಬರುತ್ತದೆ. ಬಸವಣ್ಣನವರ ಆರ್ಥಿಕ ವ್ಯವಸ್ಥೆಯು ಧರ್ಮದ ತಳಹದಿಯ ಮೇಲೆ ನಿಲ್ಲುವಂಥದು.

ವ್ಯಕ್ತಿಯ ಕಾಯಕ ಸತ್ಯ–ಶುದ್ಧವಾಗಿರಬೇಕಲ್ಲದೆ, ಹುಸಿ ಮೋಸ ಕಳವು ಮುಂತಾದವುಗಳು ಅರ್ಥ ಸಂಪಾದನೆಯಲ್ಲಿರಬಾರದು. ಪ್ರಾಮಾಣಿಕತೆ, ನಂಬಿಕೆ, ಆತ್ಮಾಭಿಮಾನ ವಿದ್ದಾಗ ಸಮಾಜದ ಆರ್ಥಿಕ ವ್ಯವಸ್ಥೆಯು ವಿಕಾಸವಾಗುತ್ತಾ ಸಾಗುತ್ತದೆ. ತಾನು ಕೈಗೊಳ್ಳುವ ಉದ್ಯೋಗವು ಕೇವಲ ಸ್ವಾರ್ಥದಿಂದ ಕೂಡಿದ್ದರೆ, ಅದು ತನ್ನ ಕುಟುಂಬ ರಕ್ಷಣೆಯಲ್ಲಿ ಸಂಕುಚಿತತೆಯಾಗುತ್ತದೆ. ಅದಕ್ಕೆ ಪ್ರತಿಯಾಗಿ ಬಸವಣ್ಣನವರ ಪ್ರಕಾರ ಕಾಯಕದ ಗಳಿಕೆಯನ್ನು ತಾನು ದಾಸೋಹದ ಮೂಲಕ ವಿನಿಯೋಗಿಸುವುದು ಮುಖ್ಯ. ಪರರಿಗೆ ಹಂಚದೇ ಇರುವ ಸ್ವಾರ್ಥಿ ನಾನಲ್ಲವೆನ್ನುತ್ತಾ;

***ಹೊನ್ನಿನೊಳಗೊಂದರೆಯ, ಸೀರೆಯೊಳಗೊಂದೆಳೆಯ***
***ಅನ್ನದೊಳಗೊಂದಗುಳ ಇಂದಿಗೆ–ನಾಳಿಂಗೆ***
***ಬೇಕೆಂದನಾದಡೆ ನಿಮ್ಮಾಣೆ***
***ನಿಮ್ಮ ಪುರಾತನರಾಣೆ***
***ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ***
***ಕೂಡಲಸಂಗಮದೇವಾ.***

ಎಂದು ನುಡಿದಿದ್ದಾರೆ. ಇಂಥ ಸ್ವಭಾವದಿಂದ ಮಾತ್ರ ಸಮಾಜದಭ್ಯುದಯ ಸಾಧ್ಯವಲ್ಲವೆ!. ಈ ವರ್ಗಕ್ಕೆ ಆಯ್ದಕ್ಕಿ ಲಕ್ಕಮ್ಮ ಮತ್ತು ಮಾರಯ್ಯ ದಂಪತಿಗಳನ್ನು ನೆನಪಿಸಿಕೊಳ್ಳಬಹುದು. ಇವರಿಗೆ ದೇಶದ ಆರ್ಥಿಕ ಸ್ಥಿತಿ–ಗತಿಯ ಪರಿಚಯವಿಲ್ಲದಿರಬಹುದು. ಆದರೂ ಇವರ ದೂರ ದೃಷ್ಟಿಯು ಸಮಾಜದ ಕಾಳಜಿಯನ್ನು ನಿಜಕ್ಕೂ ಮೆಚ್ಚಲೇಬೇಕಲ್ಲವೆ ಅದೇ ರೀತಿ ಬಸವಣ್ಣನವರು ಇಲ್ಲಿ ಹೊನ್ನು–ಬಟ್ಟೆ–ಅನ್ನ ಇವುಗಳನ್ನು ಸ್ವಾರ್ಥದಿಂದ ಇಂದು–ನಾಳೆಗೆಂದು ಕೂಡಿಡ ಲಾರನೆಂದು ಪ್ರತಿಜ್ಞೆಗೈದಿದ್ದಾರೆ. ಒಂದು ವೇಳೆ ಸಂಗ್ರಹಿಸಿದ್ದರೆ ಮತ್ತೆ ಅದು ಶರಣರಿಗಾಗಿಯೇ ವಿನಿಯೋಗಿಸುತ್ತೇನೆಂದು ನಿಶ್ಚಯಿಸಿಕೊಂಡಿದ್ದಾರೆ. ಸಂಗ್ರಹಿಸಿದ್ದು ಸತ್ಪಾತ್ರಕ್ಕೆ ಸಲ್ಲಿಸಿದಾಗ ಅದು ಆರ್ಥಿಕತೆಯ ಏರು–ಪೇರುಗಳನ್ನು ಸರಿದೂಗಿಸಲು ಅನುಕೂಲವಾಗ ಬಹುದೆಂಬುದು ಬಸವಣ್ಣನವರ ವಿಚಾರ.

ಇಂದೂ ಸಹ ಪ್ರತಿಯೊಬ್ಬರು ಹೊಟ್ಟೆಬಾಕತನವನ್ನು ಬಿಟ್ಟು ಹೊಟ್ಟೆ ಬಟ್ಟೆಗಳ ಪೂರೈಕೆಯಲ್ಲಿ ತೃಪ್ತರಾದರೆ ಯಾವ ಭಾರತೀಯನೂ ಹಸಿದಿರಬೇಕಾಗಿಲ್ಲ. ಪರರ ಚಿಂತನೆ ದಿನದ ಒಂದು ಗಳಿಗೆಯೂ ಮಾಡದಿದ್ದರೆ ಸಿರಿತನ– ಬಡತನಗಳ ಅಂತರ ದಿನದಿನಕ್ಕೂ ಅಧಿಕವಾಗುತ್ತಾ ಹೋಗಬಹುದೆಂಬ ಆಲೋಚನೆ ಗಾಂಧೀಜಿಯವರದಾಗಿತ್ತು. ಇಂದಿನ ದಾರುಣ ಪರಿಸ್ಥಿತಿ ಬಸವಣ್ಣನವರ ಕಾಲದಲ್ಲೂ ಹಸಿಹಸಿಯಾಗಿದ್ದಿರಬೇಕು. ಮಂತ್ರಿಗಳು, ಅಧಿಕಾರಿಗಳು, ವರ್ತಕರು, ಮಾಲೀಕರು, ಶ್ರೀಮಂತರು ಆಡಂಬರದ ಜೀವನವನ್ನು ತೊರೆದು, ತಮ್ಮ ಹೆಚ್ಚುವರಿ ಆದಾಯವನ್ನು ಬಡವರಿಗೆ ಹಂಚಿದರೆ ಯಾರೂ ಹಸಿವಿನಿಂದ ಸಾಯಬೇಕಾಗುವುದಿಲ್ಲ. ಇಂಥಹವರನ್ನು ಕಂಡಿರಬಹುದಾದ ಬಸವಣ್ಣನವರ

ಹೃದಯ ಕಲಕಿ ತಮ್ಮ ಸಾತ್ವಿಕ ಕೋಪವನ್ನು ಹೀಗೆ ಹೊರಹಾಕಿದ್ದಾರೆ;

*ಹಾವು ತಿಂದವರ ನುಡಿಸಬಹುದು*
*ಗರ ಹೊಡೆದವರ ನುಡಿಸಬಹುದು*
*ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯ!*
*ಬಡತನವೆಂಬ ಮಂತ್ರವಾದಿ ಹೋಗಲು ಒಡನೆ*
*ನುಡಿವರು ಕೂಡಲಸಂಗಮದೇವಾ*

ಇದು ಸಕಾಲಿಕ, ಸಾರ್ವಕಾಲಿಕ ಸತ್ಯವಾದುದೆ. ಅಧಿಕಾರವೆನ್ನುವುದು ಅಹಂಕಾರದ ಪ್ರತೀಕವಾಗಬಾರದು. ಸಕಲ ದುರ್ಗುಣಗಳ ಅಡಿಪಾಯವೇ ಅಹಂಕಾರ, ಹಣದ ಸಂಗ್ರಹ ಹೆಚ್ಚಾದಷ್ಟೂ ಹಗೆತನ, ಭಯ, ಅಸೂಯೆ ಹೆಚ್ಚಾಗುತ್ತವೆ. ಹಾವು ಕಚ್ಚಿಸಿಕೊಂಡು ಪ್ರಜ್ಞೆ ತಪ್ಪಿದವರನ್ನು ಹೇಗೋ ಮಾತಾಡಿಸಬಹುದು. ಆದರೆ ಧನಮದ ನೆತ್ತಿಗೇರಿದವರನ್ನು ಮಾತಾಡಿಸುವುದು ತುಂಬಾ ಕಷ್ಟವೆಂದು ಬಸವಣ್ಣನವರು ಎಚ್ಚರಿಸಿದ್ದಾರೆ. ಸಂಪತ್ತಿನ ಅಮಲು ಅಹಂಕಾರವಾದಾಗ ಅದನ್ನಿಳಿಸಲು ಬಡತನದ ನೋವು ಅವರಿಗುಂಟಾದಾಗ ಮಾತ್ರ. ಇಂಥವರಿಂದಲೂ ಆರ್ಥಿಕತೆಯ ದುಷ್ಪರಿಣಾಮ ಹೇಗಾಗುತ್ತದೆಂಬುದನ್ನು ಸೂಕ್ಷ್ಮವಾಗಿ ಬಸವಣ್ಣನವರು ಕಂಡರಿಸಿದ್ದಾರೆ. 'ಗುಡಿಸಲಿನಲ್ಲಿರುವ ಬಡವನಿಗಿಂತ ಬಂಗಲೆಯಲ್ಲಿನ ಶ್ರೀಮಂತ ಹೆಚ್ಚು ಸುಖವಾಗಿರುತ್ತಾನೆಂದು' ಹೇಳುವುದು ಭ್ರಮೆಯಷ್ಟೆ. ಅವಶ್ಯಕತೆಗಿಂತ ಅಧಿಕ ಸಂಗ್ರಹವು ಕಳ್ಳತನಕ್ಕೆ ಸಮವೆಂಬುದು ಶರಣರ ಪ್ರತಿಪಾದನೆಯಾಗಿತ್ತು. 'ಒಂದು ಸೂಜಿಯ ಕಣ್ಣಲ್ಲಿ ಒಂಟೆ ನುಸುಳಬಹುದು. ಆದರೆ ಶ್ರೀಮಂತನು ಮಾತ್ರ ಭಗವಂತನ ರಾಜ್ಯವನ್ನು ಪ್ರವೇಶಿಸಲಾರ' ಎಂಬ ಮ್ಯಾಥ್ಯೂ ವಿನ ಸೂಕ್ತಿಯೂ ಆರ್ಥಿಕ ಚಿಂತನೆಗೆ ಹತ್ತಿರವಾಗಿದೆ.

ಅಧಿಕ ಲಾಭವಾಗಲಿ, ಭವಿಷ್ಯಕ್ಕೆಂದು ಸಂಗ್ರಹ ಮಾಡುವುದಾಗಲಿ ಮಹಾಪರಾಧವೆಂದು ಬಸವಣ್ಣನವರ ಅಭಿಮತ. ದುಡಿಮೆಗಾರನಿಗೆ ಕಡಿಮೆ ಕೂಲಿ ಕೊಡುವುದಾಗಲಿ, ದುಡಿಮೆಗಾರ ಲಾಭ ಸಂಪಾದನೆಗೆ ಹೊಂಚು ಹಾಕು ವುದಾಗಲಿ ಕಾಯಕ ತತ್ತ್ವಕ್ಕೆ ವಿರೋಧ. ಈ ಬಗ್ಗೆ ನುಲಿಯ ಚಂದಯ್ಯ ಹೀಗೆ ಹೇಳಿದ್ದಾನೆ;

*ನೇಮದ ಕೂಲಿಯಂದಿನ ನಿತ್ಯನೇಮದಲ್ಲಿ*
*ಸಂದಿರಬೇಕು. ನೇಮದ ಕೂಲ್ವಿಯ ಬಿಟ್ಟು*
*ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ*
*ತಾ ಮಾಡುವ ಸೇವೆ ನಷ್ಟವಯ್ಯ.*

ಲಾಭ-ಸಂಗ್ರಹಕ್ಕೆ ಅಥವಾ ಇತಿ-ಮಿತಿಗಳನ್ನು ಚಂದಯ್ಯ ಇಲ್ಲಿ ನಿಚ್ಚಳವಾಗಿ ಪ್ರತಿಕ್ರಿಯಿಸಿದ್ದಾನೆ. 'ಆಸ್ತಿ ಸಂಗ್ರಹ ಚೌರ್ಯಕ್ಕೆ ಸಮ' ಎಂಬ ಫ್ರೆಂಚ್ ಸಮಾಜವಾದಿಯೊಬ್ಬರು ನುಡಿದಿದ್ದಾರೆ. ಬಸವಣ್ಣನವರದು ಅದೇ ದೃಷ್ಟಿ.

'ಧನವಿರಿಸದಿರಾ, ಇರಿಸಿದರೆ ಭವಬಪ್ಪುದು ತಪ್ಪದು' ಅಂದರೆ ಧನಸಂಗ್ರಹದಿಂದ ಘೋರವಾದ ಪಾಪ ಪ್ರಾಪ್ತವಾಗುತ್ತದೆಂದು. ದ್ರವ್ಯವನ್ನು ಸಂಪಾದನೆ ಮಾಡುವುದು ತಪ್ಪಲ್ಲ. ಆದರೆ ಮತ್ತೆ ಬಳಸದೇ ಹಾಗೆಯೇ ಕ್ರೋಡೀಕರಿಸುವುದು ಸಮಾಜಕ್ಕೆ ಹಾನಿಯಾಗುತ್ತದೆ.

*ಆಯುಷ್ಯವುಂಟು ಪ್ರಳಯುವಿಲ್ಲೆಂದು ಅರ್ಥವ ಮಡುಗುವಿರಿ;*
*ಆಯುಷ್ಯವು ತೀರಿ ಪ್ರಳಯ ಬಂದಡೆ ಅರ್ಥವನುಂಬುವರಿಲ್ಲ*
*ನೆಲನನಗೆದು ಮಡುಗದಿರಾ- ನೆಲ ನುಂಗಿದಡುಗುಳುವುದೆ?*
*ಕಣ್ಣನಲ್ಲಿ ನೋಡಿ, ಮಣ್ಣನಲ್ಲಿ ನೆರಹಿ, ಉಣ್ಣದೆ ಹೋಗದಿರಾ!*
*ನಿನ್ನ ಮಡಗಿಗಿರಲೆಂದಡೆ, ಮಡದಿಯ ಕೃತಕ ಬೇರಿ;*
*ನಿನ್ನೊಡಲು ಕೆಡೆಯಲು ಮತ್ತೊಬ್ಬನಲ್ಲಿ ಗಡಕದೆ ಮಾಣ್ಬಳೆ ?*
*ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ*
*ಕೂಡಲಸಂಗನ ಶರಣರಿಗೆ ಒಡನೆ ಸವೆಸುವುದು.*

ಈ ವಚನ ಕಾಳಸಂತೇಕೋರರರನ್ನು, ಕಪ್ಪುಹಣದ ಒಡೆಯರನ್ನು, ಜಿಪುಣಾಗ್ರೇಸರನ್ನು ಟೀಸುವಂತಿದೆ. ಜೀವನದ ನಶ್ವರತೆಯನ್ನು ಮನಗಾಣದೆ ತನಗೆ ಆಯುಷ್ಯವುಂಟೆಂದು, ನಾಶವೇ ಇಲ್ಲವೆಂದು ಭ್ರಮಿಸಿ ಹಣ ಸಂಗ್ರಹಿಸುವವರಿಗೆ ಬಸವಣ್ಣನವರು ಎಚ್ಚರಿಸಿದ್ದಾರೆ. ಆಯುಷ್ಯ ಮುಗಿದು ಪ್ರಳಯ ಬಂದರೆ ಅಥವಾ ಹೂತಿಟ್ಟ ಹಣ ಪ್ರಳಯದಲ್ಲಿ ಹಾಳಾದರೆ ಮತ್ತೆ ಪಡೆಯಲಾಗುವುದಿಲ್ಲ. ಕೂಡಿಟ್ಟ ಸಂಪತ್ತನ್ನು ಸ್ವಾರ್ಥಕ್ಕಷ್ಟೇ ಬಳಸದೆ ಕೂಡಲಸಂಗನ ಶರಣರಿ(ಸಮಷ್ಟಿ)ಗೆ ಸವೆಸಿದರೆ ಸದ್ವಿನಿಯೋಗದಲ್ಲಿ ಸಾರ್ಥಕವಾಗುತ್ತದೆ. ದುಡಿಮೆಯನ್ನು ಸ್ವಾರ್ಥಕ್ಕಾಗಿ ಬಳಸದೇ ಸಮಾಜಕ್ಕಾಗಿ ವಿನಿಯೋಗಿಸಿದಾಗ ಆರ್ಥಿಕ ದೃಷ್ಟಿ ಇನ್ನಷ್ಟು ವಿಸ್ತಾರ ವಾಗುತ್ತದೆಂಬುದು ಬಸವಣ್ಣನವರ ಅಭಿಪ್ರಾಯ.

*ಹಾವಿನ ಬಾಯ ಕಪ್ಪೆ ಹಸಿದು,*
*ಹಾರುವ ನೊಣಕ್ಕೆ ಆಸೆ ಮಾಡುವಂತೆ,*





*ಶೂಲವನೇರುವ ಕಳ್ಳನು ಹಾಲುತುಪ್ಪವ ಕುಡಿದು*
*ಮೇಲೇಸು ಕಾಲ ಬದುಕುವನೊ?*
*ಕೆಡವೊಡಲ, ನಚ್ಚಿ, ಕಡು ಹುಸಿಯನೆ ಹುಸಿದು*
*ಒಡಲ ಹೊರೆವರ*
*ಕೂಡಲಸಂಗಮದೇವನ ವರನೊಲ್ಲ ಕಾಣಿರಣ್ಣಾ!*

ಮನುಷ್ಯನ ಐಹಿಕ ಜೀವನ ಎಷ್ಟೊಂದು ಅತಂತ್ರ ಸ್ಥಿತಿಯಲ್ಲಿದೆ ಎಂಬುದನ್ನು ಈ ವಚನ ನಿರೂಪಿಸುತ್ತದೆ. ಇಂದಿನ ಜಾಗತೀಕರಣದ ಹಿನ್ನಲೆಯಲ್ಲಿ ಈ ವಚನ ವಿಶ್ಲೇಷಿಸಿದಾಗ; ಅಂತರಾಷ್ಟ್ರೀಯ ಆರ್ಥಿಕತೆಯ ಸೂತ್ರಗಳು ಮನೆಯ ಹೊಸ್ತಿಲು ದಾಟಿ ನಡುಮನೆಯಲ್ಲಿ ಬೇರುಬಿಟ್ಟಿವೆ. ಭೌತಿಕ ವಸ್ತುಗಳ ಸಿರಿವಂತಿಕೆಯ ಅಳತೆಗೋಲಾಗಿರುವ ಪ್ರತಿಯೊಬ್ಬರ ಭೋಗಜೀವನವು ವಿಪರೀತವಾಗಿದೆ. ಇಡೀ ವಿಶ್ವ ಇಂದು 'ಜಾಗತಿಕಹಳ್ಳಿ' (Global Village) ಯಾಗಿದೆ. ಮೇಲ್ನೋಟಕ್ಕೆ ಹತ್ತಿರವಿದ್ದರೂ ಒಳನೋಟದಲ್ಲಿ ಅದರಲ್ಲೂ ಆರ್ಥಿಕ ಕ್ಷೇತ್ರದಲ್ಲಿ ರಾಷ್ಟ್ರ ರಾಷ್ಟ್ರಗಳ ನಡುವೆ ತೀವ್ರ ಪೈಪೋಟಿ, ಶೋಷಣೆಗಳು ಹೆಚ್ಚಾಗಿವೆ. ಬಲಾಢ್ಯ ರಾಷ್ಟ್ರಗಳು, ಬಲಹೀನ ರಾಷ್ಟ್ರಗಳಲ್ಲಿರುವ ಸಂಪತ್ತನ್ನು ಲೂಟಿ ಮಾಡುತ್ತಿವೆ. ಹಾಗೆಯೇ ಸಣ್ಣ ರಾಷ್ಟ್ರಗಳು ಅತೀ ಸಣ್ಣ ರಾಷ್ಟ್ರಗಳ ಮೇಲೆ ಅಧಿಕಾರ ಚಲಾಯಿಸಿ ನುಂಗುವ (ಹಾವು ಕಪ್ಪೆ ನುಂಗು ವಂತೆ) ಪ್ರಕ್ರಿಯೆಯಲ್ಲಿ ತೊಡಗಿವೆ. ಅಲ್ಲದೆ ಮಾನವ ಸಂಪನ್ಮೂಲವೂ ಸಹ ನಮ್ಮ ರಾಷ್ಟ್ರದಲ್ಲಿ ಮಾರಾಟವಾಗುತ್ತಿದೆ.

ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ರಾಷ್ಟ್ರೀಯ ವ್ಯವಸ್ಥೆಯಲ್ಲಿ ರಾಷ್ಟ್ರೀಯ ವರಮಾನ (National Income) ಬಹಳ ಮಹತ್ವದ್ದಾಗಿದೆ. ಇದು ರಾಜ್ಯ ಅಥವಾ ರಾಷ್ಟ್ರದ ಆದಾಯ-ವೆಚ್ಚಗಳ ಅಧ್ಯಯನದ ಮೂಲದಿಂದ ಬರುವಂಥಾದ್ದು. ಅಂದರೆ ರಾಜ್ಯಕ್ಕೆ ಬಹುಪಾಲು ಆದಾಯ ತೆರಿಗೆಯ ಮೂಲಕ ಸಂಗ್ರಹವಾಗುತ್ತದೆ. ಹೀಗೆ ಸಂಗ್ರಹವಾದ ತೆರಿಗೆ ರೂಪದ ಹಣವನ್ನು ಮತ್ತೆ ಸಾರ್ವತ್ರಿಕ, ಸಾರ್ವಜನಿಕ ಕಾರ್ಯಗಳಿಗೆ ವಿನಿಯೋಗಿಸುವ ಮಧ್ಯವರ್ತಿ ಕೆಲಸ ನಿರಂತರ ನಡದೇ ಇರಬೇಕಷ್ಟೆ. ಬಸವಣ್ಣನವರು ಈ ಆರ್ಥಿಕ ನೀತಿಯನ್ನು ಸರಿಯಾಗಿ ಬಲ್ಲವರಾಗಿದ್ದರು. ಕಲ್ಯಾಣ ರಾಜ್ಯದ ಮಹಾಮಂತ್ರಿಯಾಗಿದ್ದ ಅವರು ಆಡಳಿತ ಯಂತ್ರ ವನ್ನು ಹೇಗೆ ? ಎಷ್ಟು ? ಎಲ್ಲಿ? ಯಾವುದರಿಂದ ನಡೆಸ ಬೇಕೆಂಬುದು ತಿಳಿದಿತ್ತು. ರಾಜ್ಯದ ಉತ್ಪಾದನೆಗಾಗಿ ಹಲವು ತೆರಿಗೆಗಳನ್ನು ವಿಧಿಸಿದ್ದರು.

ಗಳಿಕೆಯಲ್ಲಿ ನೂರೆಂಟು ದಾರಿಗಳುಂಟು. ಅವುಗಳ ಗುರಿ ಮಾತ್ರ ಒಳ್ಳೆಯದಾಗಿರಬೇಕು. ಅನ್ಯರನ್ನು ಬೇಡುವುದು ಕಾಯಕವಲ್ಲ. 'ಬೇಡುವವನು ಹತ್ತಿಗಿಂತ ಹಗುರ ಹುಲ್ಲಿಗಿಂತ ಕಡೆ', 'ಬೇಡಿ ತಿನ್ನದೇ ಮಾಡು ತಿನ್ನು', ಬೇಡುವವನ ಕೈ ಸದಾ ಕೆಳಗೆ', 'ಬೇಡುವವನು ಭಕ್ತನಲ್ಲ' ಇತ್ಯಾದಿ ನುಡಿಗಳನ್ನು ಬಸವಣ್ಣನವರ ಆರ್ಥಿಕ ಚಿಂತನೆಯಲ್ಲಿ ಕಾಣುತ್ತೇವೆ. ಬೇಡುವುದು ಹೀನಾಯವಾದುದು. ಹಾಗೆಯೇ ಬೆವರು ಸುರಿಸದೇ ಅನಾಯಾಸವಾಗಿ ಬಂದದ್ದು ಕಳ್ಳತನಕ್ಕೆ ಸಮವಾದುದು.

*ಕೃಷಿಕೃತ ಆವ ಕಾಯಕದಿಂದಾಡೇನು*
*ತನು ಬಳಲಿ, ತಂದು ದಾಸೋಹ ಮಾಡುವ*
*ಪರಮಭಕ್ತನ ತೋರಯ್ಯ ಎನಗೆ*

ಎಂದು ಕಾಯಕ ಸಿದ್ಧಾಂತದ ಮುಖಾಂತರ ವ್ಯಕ್ತಿಸ್ವಾತಂತ್ರ್ಯವನ್ನು, ಶ್ರಮದ ಪವಿತ್ರತೆಯನ್ನು ಎತ್ತಿ ಹಿಡಿದಿದ್ದಾರೆ. ದುಡಿಮೆಯಲ್ಲಿ ಪರಿಶುದ್ಧ ಮನಸ್ಸು ಮತ್ತು ನಿಷ್ಠೆಗಳಿರಬೇಕೆಂದು ಬಸವಣ್ಣನವರು ಇಲ್ಲಿ ಹೇಳಿದ್ದಾರೆ.

ಒಟ್ಟಾರೆ ಮಿತವ್ಯಯದ ತತ್ತ್ವಾಚರಣೆಯ ಬಸವಣ್ಣನವರ ಆರ್ಥಿಕ ಚಿಂತನೆಯಲ್ಲಿ ತುಂಬಾ ಮಹತ್ವ ಪಡೆದಿದೆ. ಯಾವುದೇ ರೀತಿಯಲ್ಲಿ ಧನ ಪೋಲು ಮಾಡುವುದನ್ನು ಸಹಿಸುತ್ತಿರಲಿಲ್ಲ. ಧನ ಯಾರ ಸಂಪತ್ತೂ ಅಲ್ಲ, ರಾಜ್ಯದ ಬೊಕ್ಕಸ ಕೇವಲ ರಾಜನದ್ದಲ್ಲ, ಅದು ಪ್ರಜೆಗಳದ್ದೂ ಆಗಿರುತ್ತ ದೆಂಬ ಚಿಂತನೆ ಇಂದಿನ ರಾಜಕಾರಣಿಗಳಿಗೆ ಅರ್ಥವಾದರೆ ರಾಜ್ಯ ಸುಭಿಕ್ಷವಾಗಬಹುದಲ್ಲವೆ ? ❑

*ಗುರುವಿಂಗಾದಡೆಯು ಬಸವಣ್ಣನೆ ಬೇಕು ;*
*ಲಿಂಗಕ್ಕಾದಡೆಯು ಬಸವಣ್ಣನೆ ಬೇಕು ;*
*ಜಂಗಮಕ್ಕಾದಡೆಯು ಬಸವಣ್ಣನೆ ಬೇಕು ;*
*ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ;*
*ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೆ ಬೇಕು.*

–ಸಿದ್ಧರಾಮೇಶ್ವರ



# ಡೋಹರ ಕಕ್ಕಯ್ಯ

–ಎಚ್.ಎಸ್. ಸಿದ್ಧಗಂಗಪ್ಪ *

ಪೀಠಿಕೆ : ಕರ್ನಾಟಕವಲ್ಲದೆ ಭಾರತಿಯ ಇತಿಹಾಸದಲ್ಲೇ ಹನ್ನೆರಡನೇ ಶತಮಾನ ಸುವರ್ಣಾಕ್ಷರದಲ್ಲಿ ಬರೆದಿಡಬಹುದಾದಂಥ ಮಹತ್ವದ ಕಾಲಘಟ್ಟ, ಸಮಾಜದಲ್ಲಿ ಬೇರೂರಿದ್ದ ಅಸಮಾನತೆ, ಅಸ್ಪೃಶ್ಯತೆ, ಕಂದಾಚಾರ, ಮೂಢನಂಬಿಕೆ, ಸ್ತ್ರೀ ಶೋಷಣೆ– ಇವೇ ಮೊದಲಾದ ಅನಿಷ್ಟ ಪದ್ಧತಿಗಳಿಂದ ಮುಕ್ತಗೊಳಿಸಿ ಒಂದು ಆದರ್ಶ ಸಮಾಜ ನಿರ್ಮಾಣ ಮಾಡುವ ಸಂಕಲ್ಪದಿಂದ ಬಸವಣ್ಣನವರ ನೇತೃತ್ವದಲ್ಲಿ ಶರಣರು ಸಾಮೂಹಿಕ ಪ್ರಯತ್ನ ಮಾಡಿ ಆ ನಿಟ್ಟಿನಲ್ಲಿ ಯಶಸ್ವಿಯಾಗಿದ್ದು ಒಂದು ಐತಿಹಾಸಿಕ ದಾಖಲೆ. ಬಸವಣ್ಣನವರು ತಮ್ಮ ಹೃದಯ ವೈಶಾಲ್ಯದಿಂದ ಎಲ್ಲ ಸ್ಥರದ, ಎಲ್ಲ ವೃತ್ತಿಯ ಜನರನ್ನು ಪ್ರೀತಿಯಿಂದ, ಅಭಿಮಾನದಿಂದ, ಆತ್ಮೀಯತೆಯಿಂದ ಕಂಡು ಸಮಾಜದ ಎಲ್ಲರೂ ತಮ್ಮವರೆಂದು ಭಾವಿಸಿ ಅವರಲ್ಲಿ ಆತ್ಮವಿಶ್ವಾಸವನ್ನು ಸ್ವಾಭಿಮಾನವನ್ನು ತುಂಬಿದರು. ತಾವು ಇತರರಂತೆ ಸಮಾಜದಲ್ಲಿ ಬದುಕಬೇಕು. ಯಾರು ಯಾರಿಗಿಂತ ಕೀಳಲ್ಲ ಎಂಬ ಭಾವನೆಯನ್ನು ಮೂಡಿಸಿ ಅವರಲ್ಲಿ ಜೀವನೋತ್ಸಾಹವನ್ನು ತುಂಬಿದರು. ಸತ್ಯಶುದ್ಧರಾಗಿ ಪ್ರಾಮಾಣಿಕತೆಯಿಂದ ಜೀವನ ನಡೆಸಬೇಕು ಎಂಬುದನ್ನು ಶರಣರು ತೋರಿಸಿಕೊಟ್ಟರು. ತಾವು ನುಡಿದಂತೆ ನಡೆದು ಇತರರಿಗೆ ಆದರ್ಶವಾದರು. ಬಸವಣ್ಣನವರು ಸಮಾಜಕ್ಕೆ ನೀಡಿದ ಅತ್ಯಮೂಲ್ಯ ಕೊಡುಗೆ ಎಂದರೆ 'ಕಾಯಕ' ಮತ್ತು 'ದಾಸೋಹ'. ಪ್ರತಿಯೊಬ್ಬರೂ ಸತ್ಯಶುದ್ಧ ಕಾಯಕ ಮಾಡಿ, ಕಾಯಕದಿಂದ ಬಂದುದರಲ್ಲಿ ತಮಗೆ ಅಗತ್ಯವಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ದಾಸೋಹ ಮಾಡಬೇಕು ಎಂಬ ತತ್ತ್ವವನ್ನು ಅನುಷ್ಠಾನಕ್ಕೆ ತಂದರು.

ಬಸವಣ್ಣನವರ ನೇತೃತ್ವದಲ್ಲಿ ಕೈಗೊಂಡ ಸಾಮಾಜಿಕ, ಧಾರ್ಮಿಕ ಚಳುವಳಿಯಲ್ಲಿ ಬಸವಣ್ಣನವರೊಂದಿಗೆ ನೂರಾರು ಜನ ಶರಣರು ಆದರ್ಶ ಸಮಾಜದ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರಿವರೆನ್ನದೆ ಎಲ್ಲರೂ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಅಂಥ ಶರಣ ಸಮುದಾಯದ ಪ್ರಸಿದ್ಧ ಶರಣರಲ್ಲಿ ಡೋಹರ ಕಕ್ಕಯ್ಯನೂ ಒಬ್ಬನು.

ಪ್ರಸಾರ ಹಾಗೂ ಪ್ರಚಾರ ಮಾಧ್ಯಮವಿಲ್ಲದ ಕಾಲದಲ್ಲಿ ಬಸವಾದಿ ಶರಣರು ಕೈಗೊಂಡ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯ ವಿಚಾರ ದೂರದ ಮಾಳವ ದೇಶದವರಿಗೂ ಮುಟ್ಟಿದುದು ಬಸವಣ್ಣನವರ ಪ್ರಭಾವ ಹಾಗೂ ಅವರಲ್ಲಿನ ಸಾಮಾಜಿಕ ಕಳಕಳಿಗೆ ಸಂದ ಪುರಸ್ಕಾರ. ಮಾಳವ ದೇಶದಲ್ಲಿ ಕೆಳಜಾತಿಯಲ್ಲಿ ಹುಟ್ಟಿ ಚರ್ಮ ಹದ ಮಾಡುವ ವೃತ್ತಿಯನ್ನು ಕೈಗೊಂಡಿದ್ದ ಡೋಹರ ಕಕ್ಕಯ್ಯನು ಬಸವಣ್ಣನವರ ಕಾರ್ಯದಿಂದ 'ಕಲ್ಯಾಣಕ್ಕೆ ಬಂದು ಶರಣ ಧರ್ಮವನ್ನು ಸ್ವೀಕರಿಸಿ ಮಹಾಶರಣನಾಗಿ, ಶಿವಾನುಭವಿಯಾಗಿ, ಅಂದು ವಿಶಿಷ್ಟ ಸ್ಥಾನವನ್ನು ಪಡೆದುದನ್ನು ಇತಿಹಾಸ ಹೇಳುತ್ತದೆ.

**ಡೋಹರನೆಂದರೆ ಕೀಳುಜಾತಿಯವ, ಅಂತ್ಯಜ, ಶ್ವಪಚ ಚಂಡಾಲ ಎಂದು ಅರ್ಥ. ಕೀಳುಜಾತಿಯಲ್ಲಿ ಜನಿಸಿ ಬಸವಣ್ಣನೆಂಬ ಸ್ಪರ್ಶಮಣಿಯಿಂದ ಬಂಗಾರವಾದವನು ಕಕ್ಕಯ್ಯ**

ಡೋಹರ ಕಕ್ಕಯ್ಯನು ವಚನಕಾರನಾಗಿದ್ದು ಆರು ವಚನಗಳು ಮಾತ್ರ ದೊರಕಿವೆ. ಈ ಆರು ವಚನಗಳಲ್ಲಿ ಅವನೊಬ್ಬ ಸಮರ್ಥ ವಚನಕಾರನೆಂದು ಸಾಬೀತು ಪಡಿಸಿದ್ದಾನೆ. ಮೌಲ್ಯದಿಂದ ಕೂಡಿದ ಈ ವಚನಗಳು ಅವನೊಬ್ಬ ಶ್ರೇಷ್ಠ ಅನುಭಾವಿ, ಚಿಂತಕ ಎಂಬುದು ವ್ಯಕ್ತವಾಗುತ್ತದೆ. ಇವನ ವಚನಾಂಕಿತ **'ಅಭಿನವಮಲ್ಲಿಕಾರ್ಜುನ'**.

ಡೋಹರ ಕಕ್ಕಯ್ಯನ ಪ್ರಾಮಾಣಿಕತೆ, ಆದರ್ಶ ಜೀವನ, ಕಾಯಕನಿಷ್ಠೆ, ಅನುಭಾವಕ್ಕೇರಿದ ಎತ್ತರ, ಇವೆಲ್ಲವನ್ನು ಮನ ಗಂಡ ಬಸವಣ್ಣನವರು ಕಕ್ಕಯ್ಯನನ್ನು ಕುರಿತು ಹೃದಯ ತುಂಬಿ ತಮ್ಮ ಭಾವನೆಗಳನ್ನು ವಚನಗಳ ಮೂಲಕ ಅಭಿವ್ಯಕ್ತಿ ಪಡಿಸಿದ್ದಾರೆ.

***ಅಪ್ಪನು ಡೋಹರ ಕಕ್ಕಯ್ಯನಾಗಿ ಮುತ್ತಯ್ಯ ಚೆನ್ನಯ್ಯನಾದರೆ***
***ಅನು ಬದುಕಿಸಿ ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ***
***ಭಕ್ತಿಯ ಸದ್ಗುಣವ ನಾನರಿವೆನಯ್ಯಾ***
***ಕಷ್ಟಜಾತಿಯ ಜನ್ಮದಲ್ಲಿ ಜನಿಸಿದೆ***
***ಎನಗಿದು ವಿಧಿಯೇ ಕೂಡಲಸಂಗಮದೇವಾ.***

ಬಸವಣ್ಣನವರು ಸಮಾಜದಲ್ಲಿ ಜಡ್ಡುಗಟ್ಟಿದ್ದ ಮೇಲು–

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.





ಕೀಳು ಎಂಬ ತಾರತಮ್ಯ ಭಾವನೆಯನ್ನು ಹೋಗಲಾಡಿಸಿ, ಸಮಾನತೆಯ ಬೀಜ ಬಿತ್ತಲು ಅವಿರತ ಹೋರಾಟ ನಡೆಸಿದರು. ಸಮಾಜದಲ್ಲಿನ ಕೆಲವು ಘಾತುಕ ಶಕ್ತಿಗಳಿಂದ ನಿರೀಕ್ಷಿತ ಫಲ ದೊರೆಯದೇ ಇದ್ದರೂ ಅದಕ್ಕೊಂದು ಭದ್ರ ಬುನಾದಿಯನ್ನು ಹಾಕಿದರೆಂಬುದಕ್ಕೆ ಎರಡು ಮಾತಿಲ್ಲ. ಅವರು ಕೆಳಜಾತಿಯವರನ್ನು ಪ್ರೀತಿಯಿಂದ ಅಪ್ಪಿಕೊಂಡು ಅವರೊಂದಿಗೆ ತಮ್ಮನ್ನು ಸಮೀಕರಿಸಿಕೊಂಡರು. ಇದು ಬಸವಣ್ಣನವರಲ್ಲಿ ನಾವು ಗುರುತಿಸಬಹುದಾದ ದೊಡ್ಡಗುಣ. ಹೀನಕುಲದವರ ಸಂಪರ್ಕದಿಂದ ತಾನೊಬ್ಬ ಮನುಷ್ಯನಾದೆನು ಎಂದು ಹೇಳುವುದರ ಮೂಲಕ ತಮ್ಮ ಹೃದಯ ವೈಶಾಲ್ಯತೆಯನ್ನು ಮೆರೆದಿದ್ದಾರೆ. ಬಸವಣ್ಣನವರು ದೀನ ದಲಿತರ ಮೇಲೆ ಇಟ್ಟಿದ್ದ ಪ್ರೀತಿ, ವಿಶ್ವಾಸ, ನಂಬಿಕೆ, ಆತ್ಮೀಯತೆಯನ್ನು ಸಮಾಜ ಅರ್ಥಮಾಡಿಕೊಂಡು ಅನುಷ್ಠಾನಕ್ಕೆ ತಂದಿದ್ದೇ ಆಗಿದ್ದರೆ; ಇಂದು ಭಾರತ ವಿಶ್ವದಲ್ಲೇ ಆದರ್ಶ ಸಮಾಜವನ್ನು ಹೊಂದಿರುವ ದೇಶ ಎಂಬ ಶ್ರೇಷ್ಠತೆಗೆ ಭಾಜನವಾಗುತ್ತಿತ್ತು. ಎಲ್ಲಿಯವರೆಗೆ ನಮ್ಮಲ್ಲಿ ಸಂಕುಚಿತ ಭಾವನೆ ದೂರವಾಗುವುದಿಲ್ಲವೋ, ಅಲ್ಲಿಯವರೆಗೆ ನಾವು ಉತ್ತಮ ನಾಗರಿಕರಾಗಲು ಸಾಧ್ಯವಾಗುವುದಿಲ್ಲ.

ಬಸವಣ್ಣನವರು ತಮ್ಮ ಮತ್ತೊಂದು ವಚನದಲ್ಲಿ ಡೋಹರ ಕಕ್ಕಯ್ಯನ ಆದರ್ಶ ವ್ಯಕ್ತಿತ್ವವನ್ನು ಬಹು ಸುಂದರವಾಗಿ ಅರ್ಥಪೂರ್ಣವಾಗಿ ಬಣ್ಣಿಸಿದ್ದಾರೆ;

***ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ***
***ಡೋಹಾರನೆಂಬೆನೆ ಕಕ್ಕಯ್ಯನ ?....***
***ಬೊಪ್ಪನು ನಮ್ಮ ಡೋಹರ ಕಕ್ಕಯ್ಯ***
***ಕೂಡಲಸಂಗಮದೇವಾ...***
***ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿ***
***ಸಲಹಿದರೆನ್ನ ಕೂಡಲಸಂಗಯ್ಯಾ***

ಡೋಹರ ಕಕ್ಕಯ್ಯನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ಬಸವಣ್ಣನವರ ಈ ವಚನದ ಸಾಲುಗಳು ಪುಷ್ಟಿಯನ್ನು ನೀಡುತ್ತದೆ. ಕಕ್ಕಯ್ಯನ ಮಹಾನ್ ವ್ಯಕ್ತಿತ್ವಕ್ಕೆ ಬಸವಣ್ಣನವರು ತಮ್ಮ ಹೃದಯ ಮಂದಿರದಲ್ಲಿ ಅತ್ಯುನ್ನತ ಸ್ಥಾನ ನೀಡಿ ಗೌರವಿಸಿದ್ದಾರೆ.

ವಿಶ್ವವಿಭೂತಿ ಪುರುಷ, ಸಾಮಾಜಿಕ ಕ್ರಾಂತಿಯ ಹರಿಕಾರ ಬಸವಣ್ಣನವರಿಂದ ಪ್ರಶಂಸೆಗೆ ಒಳಗಾದ ಪುಣ್ಯವಂತರ ಸಾಲಿಗೆ ಡೋಹರ ಕಕ್ಕಯ್ಯನೂ ಸೇರುತ್ತಾನೆ.

***ಸೆಟ್ಟಿ ಎಂಬೆನೆ ಸಿರಿಯಾಳನ, ಮಡಿವಾಳನೆಂಬೆನೆ***
***ಮಾಚಯ್ಯನ***
***ಡೋಹರನೆಂಬೆನೆ ಕಕ್ಕಯ್ಯನ; ಮಾದರನೆಂಬೆನೆ ಚೆನ್ನಯ್ಯನ;***
***ಅನು ಹಾರುವನೆಂದೊಡೆ ಕೂಡಲಸಂಗಯ್ಯ ನಗುವನಯ್ಯ***

ಎಂಬ ವಚನದಲ್ಲಿ ಬಸವಣ್ಣನವರು–ಸಿರಿಯಾಳ ಸೆಟ್ಟಿ ಮಡಿವಾಳ ಮಾಚಯ್ಯ, ಮಾದರ ಚನ್ನಯ್ಯ ಶರಣರಿಗೆ ನೀಡಿದ ಶ್ರೇಷ್ಠಸ್ಥಾನ ಗೌರವಗಳನ್ನು ಡೋಹರ ಕಕ್ಕಯ್ಯನಿಗೂ ನೀಡಿದ್ದಾರೆ. ಇದರಿಂದ ಕಕ್ಕಯ್ಯನು ಬಸವಣ್ಣನವರ ಮೇಲೆ ಅಷ್ಟೊಂದು ಪ್ರಭಾವ ಬೀರಿರುವುದು ಇದರಿಂದ ವ್ಯಕ್ತವಾಗುತ್ತದೆ. ಕಕ್ಕಯ್ಯನ ವ್ಯಕ್ತಿತ್ವವನ್ನು ಎಷ್ಟು ಹೊಗಳಿದರೂ ಬಸವಣ್ಣನವರಿಗೆ ತೃಪ್ತಿಯಿಲ್ಲ. ಅಂಥ ಭವ್ಯ ವ್ಯಕ್ತಿತ್ವ ಕಕ್ಕಯ್ಯನದು.

***'ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಡೋಹರ ಕಕ್ಕಯ್ಯ ಅಯ್ಯಗಳಯ್ಯನು ನಮ್ಮ ಮಾದಾರ ಚನ್ನಯ್ಯನು ಕೂಡಲಸಂಗಮದೇವಾ ನಿಮ್ಮ ಶರಣ ನನ್ನ ಸಲಹುವರಾಗಿ ಒಲಿದರೆನ್ನ ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯನೆಮ್ಮಯ್ಯ ಕಾಣಿರಯ್ಯ ಅಣ್ಣನು ಕಿನ್ನರಿ ಬೊಮ್ಮಯ್ಯ'.***

ಸಮಾಜದ ವಿವಿಧ ವರ್ಗಗಳ ಜನರನ್ನು ಬಸವಣ್ಣನವರು ಪ್ರೀತಿ ವಾತ್ಸಲ್ಯದಿಂದ, ಮುಕ್ತ ಮನಸ್ಸಿನಿಂದ ಆದರಿಸಿ ಗೌರವಿಸಿದರು. ಅವರವರು ಮಾಡುವ ಕಾಯಕದಲ್ಲಿ ಶ್ರೇಷ್ಠತೆಯನ್ನು ಕಂಡರು. ಅವರು ಮಾಡುವ ಕಾಯಕ ಯಾವ ಕಾಯಕಕ್ಕೂ ಕಡಿಮೆಯಿಲ್ಲ ಎಂಬುದನ್ನು ತೋರಿಸಿಕೊಟ್ಟರು. ಬಸವಣ್ಣನವರ ಮಾತು, ವ್ಯಕ್ತಿತ್ವವು ವಿವಿಧ ವರ್ಗಗಳಿಂದ ಬಂದ ಶರಣರನ್ನು ಆಕರ್ಷಿಸಿತು. ಅವರ ಬಗ್ಗೆ ಭಕ್ತಿ, ಗೌರವ ಮೂಡಿದವು. ಈ ಮೇಲಿನ ವಚನ ಬಸವಣ್ಣನವರು ಸಮಾಜದ ವಿವಿಧ ವರ್ಗಗಳ ಜನರೊಂದಿಗಿನ ಭಾವನೆ ಎಷ್ಟು ಉತ್ಕೃಷ್ಟವಾಗುತ್ತು ಎಂಬುದನ್ನು ತಿಳಿಸುತ್ತದೆ. ಕೆಳವರ್ಗದ ಜನರೊಂದಿಗೆ ಬಸವಣ್ಣನವರ ಆತ್ಮೀಯ ಸಂಬಂಧ, ಸಾಮಾಜಿಕ ಕಳಕಳಿ, ಅವರಿಗೂ ಸಮಾಜದಲ್ಲಿ ಉನ್ನತಸ್ಥಾನ ಗೌರವವನ್ನು ದೊರಕಿಸಿಕೊಡಬೇಕೆಂಬ ತುಡಿತ ಅವರ ಅನೇಕ ವಚನಗಳಲ್ಲಿ ವ್ಯಕ್ತವಾಗಿದೆ. ಬಸವಣ್ಣನವರ ಈ ವಿಶಾಲ ಭಾವನೆಯಿಂದಲೇ ಇರಬೇಕು, ಹನ್ನೆರಡನೇ ಶತಮಾನದಲ್ಲಿ ವಿವಿಧ ಸ್ತರಗಳಲ್ಲಿನ ಜನ ಆತ್ಮವಿಶ್ವಾಸವನ್ನು ತುಂಬಿಕೊಂಡು ಮುಕ್ತ ಮನಸ್ಸಿನಿಂದ ಶರಣ ಧರ್ಮವನ್ನು ಸ್ವೀಕರಿಸಿ ಆದರ್ಶ ಸಮಾಜ ನಿರ್ಮಾಣಕ್ಕೆ ಪ್ರಾಮಾಣಿಕವಾಗಿ ಕೈಜೋಡಿಸಿದರು.

**ಪ್ರಸಾದದ ಘಟನೆ :** ಡೋಹರ ಕಕ್ಕಯ್ಯನ ಆದರ್ಶ ಭಕ್ತಿಯನ್ನು ಒರೆಹಚ್ಚುವ ಒಂದು ಪ್ರಸಂಗ ನಡೆಯುತ್ತದೆ. ಒಮ್ಮೆ ಬಸವಣ್ಣನವರು ಬಿಜ್ಜಳನ ಓಲಗಕ್ಕೆ ಹೊರಟಿದ್ದಾಗ ಕಕ್ಕಯ್ಯನ

ಮಡದಿ ಪ್ರಸಾದ ಸ್ವೀಕರಿಸಿ ತಮ್ಮ ಮನೆ ಮನವನ್ನು ಪಾವನಗೊಳಿಸ ಬೇಕೆಂದು ವಿನಯಶೀಲಳಾಗಿ ಭಕ್ತಿಯಿಂದ ಭಿನ್ನವಿಸಿ ಕೊಂಡರೂ ದೊರೆಯ ಆಸ್ಥಾನಕ್ಕೆ ಹೋಗುವ ತರಾತುರಿಯಲ್ಲಿದ್ದ ಬಸವಣ್ಣ, ತುರ್ತಾಗಿ ಹೋಗಬೇಕಾಗಿ ರುವುದರಿಂದ ಮತ್ತೆ ಬರುವುದಾಗಿ ಹೇಳಿ ಹೋದ ವಿಷಯ ತಿಳಿದ ಕಕ್ಕಯ್ಯನ ಸ್ವಾಭಿಮಾನ ಕೆರಳಿತು. ಬಸವಣ್ಣನವರು ನಮ್ಮ ಭಕ್ತಿಗೆ ಮಾಡಿದ ಅಪಚಾರ, ಅದು ಪ್ರಸಾದಕ್ಕಾದ ಅಪಮಾನ ವೆಂದು ಭಾವಿಸಿದರು. ಓಲಗದ ಕೆಲಸವನ್ನು ಮುಗಿಸಿ ಕೊಂಡು ಮನೆಗೆ ಹಿಂತಿರುಗುವಾಗ ಕಕ್ಕಯ್ಯನ ಮನೆಗೆ ಬಂದರೂ, ಬಾಗಿಲು ಮುಚ್ಚಿತ್ತು.

ಬಸವಣ್ಣನವರು ಕಕ್ಕಯ್ಯನ ನಿಷ್ಕಲ್ಮಶ ವ್ಯಕ್ತಿತ್ವವನ್ನು ಲೋಕಕ್ಕೆ ಪರಿಚಯ ಮಾಡಿಕೊಡುವ ಈ ಘಟನೆ ನಿಮಿತ್ತ ಮಾತ್ರವಾದರೂ ಸತ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ. ಹೇಗಾದರೂ ಮಾಡಿ ಕಕ್ಕಯ್ಯನ ಮನೆಯ ಪ್ರಸಾದವನ್ನು ಪಡೆಯಲೇಬೇಕೆಂಬ ಉದ್ದೇಶದಿಂದ ಬಸವಣ್ಣ ಪ್ರತಿನಿತ್ಯ ಹೋಗಿ ಬರುವುದನ್ನು ನಿಲ್ಲಿಸಲಿಲ್ಲ. ಒಂದು ದಿನ ಕಕ್ಕಯ್ಯನ ಮನೆಯಿಂದ ಅನ್ನದ ಅಗುಳನ್ನು ಕಚ್ಚಿ ತರುವ ಇರುವೆಯನ್ನು ನೋಡಿ, ಸಕ್ಕರೆ ಹಳುಕನ್ನು ತೋರುತ್ತಾರೆ. ಸಕ್ಕರೆಯ ಆಸೆಗಾಗಿ ಇರುವೆ ತಾನು ಕಚ್ಚಿತಂದಿದ್ದ ಅಗುಳನ್ನು ಅಂಗಳ ದಲ್ಲಿಯೇ ಬಿಡುತ್ತದೆ. ಬಸವಣ್ಣನವರು ಆ ಅನ್ನದ ಅಗುಳನ್ನು ಮಹಾಪ್ರಸಾದವೆಂದು ಪ್ರೀತಿಯಿಂದ, ಸ್ವೀಕರಿಸಿದರು ಎಂದು ಕಾವ್ಯಗಳಲ್ಲಿ ಬಣ್ಣನೆಯಿದೆ.

ಲೋಕಕ್ಕೆ ಕಕ್ಕಯ್ಯ ಮಹಾಪ್ರಸಾದಿ, ಅವನ ಮನೆಯ ಪ್ರಸಾದ ಅತ್ಯಂತ ಪವಿತ್ರವಾದುದೆಂದು ತಿಳಿಸುವುದಕ್ಕಾಗಿಯೇ ಇಂಥ ಪ್ರಸಂಗಗಳು ಹುಟ್ಟಿಕೊಂಡಿರಬೇಕು. ಇದರಿಂದ ಕಕ್ಕಯ್ಯ ಎಂಥ ಶ್ರೇಷ್ಠ ಶರಣ ಎಂಬುದು ಪರಿಚಯ ವಾಗುತ್ತದೆ. ಈ ಶ್ರೇಷ್ಠತೆ ಚರ್ಮ ಹದ ಮಾಡುವ ಕಾಯಕದ ಕಕ್ಕಯ್ಯನಿಗೆ ಬರಬೇಕಾದರೆ ಅವರ ಬದುಕು ಎಂಥ ಉನ್ನತ ಸ್ಥಿತಿಯಲ್ಲಿರಬೇಕು? ಇದು ಹೇಗೆ ತನಗೆ ಸಾಧ್ಯವಾಯಿತೆಂಬು ದನು ಕಕ್ಕಯ್ಯ ತನ್ನ ವಚನದಲ್ಲಿ ಹೀಗೆ ಅಭಿವ್ಯಕ್ತಿಗೊಳಿಸಿದ್ದಾನೆ.

*ತನ್ನ ಕಷ್ಟಕುಲದ ಸೂತಕ ನಿಮ್ಮ ಹಸ್ತಮುಟ್ಟಿದಲ್ಲಿ ಹೋಯಿತ್ತು*
*ತಟ್ಟಿದ ಮುಟ್ಟಿದ ಸುಖಂಗಳೆಲ್ಲವ ಲಿಂಗಮುಖಕ್ಕೆ ಅರ್ಪಿಸಿದೆನಾಗಿ*
*ಎನ್ನ ಪಂಚೇಂದ್ರಿಯಗಳು ಬಯಲಾದವು. ಎನ್ನಂತರಂಗದಲ್ಲಿ*
*ಜ್ಞಾನ ಜ್ಯೋತಿಯೆಡೆಗೊಂಡುದಾಗಿ ಒಳಗೂ ಬಯಲಾಗಿತ್ತು.*
*ಸಂಸಾರದ ಸಂಗದ ಅವಸ್ಥೆಯ ಮೀರಿದ ಸ್ತ್ರೀಯಲ್ಲಿ*
*ತರಹರವಾಯಿತ್ತಾಗಿ*
*ಬಹಿರಂಗ ಬಯಲಾಗಿತ್ತು ಅಭಿನವ ಮಲ್ಲಿಕಾರ್ಜುನಾ*
*ನಿಮ್ಮ ಮುಟ್ಟಿದ ಕಾರಣ ನಾನೂ ಬಯಲಾದೆನು.*

ಒಬ್ಬ ಸಾಮಾನ್ಯ ವ್ಯಕ್ತಿ ಆಧ್ಯಾತ್ಮಿಕ ಶಿಖರವನ್ನು ಮುಟ್ಟ ಬೇಕಾದರೆ ಕ್ರಮಿಸಬೇಕಾದ ದಾರಿ ಯಾವುದು ಎಂಬುದನ್ನು ಈ ವಚನ ಸ್ಪಷ್ಟವಾಗಿ ತಿಳಿಸುತ್ತದೆ.

ಕಕ್ಕಯ್ಯನವರದು ರಾಗದ್ವೇಷವಿಲ್ಲದ ನಿರಾಡಂಬರ ವ್ಯಕ್ತಿತ್ವ. ವ್ಯಕ್ತಿಯ ಭಾವನೆಗಳನ್ನು ಕೆದಕಿ ಅಡ್ಡದಾರಿ ಹಿಡಿಯುವಂತೆ ಮಾಡುವ ಅಷ್ಟಮದಗಳೂ ಅವನ ಹತ್ತಿರ ಸುಳಿಯಲು ಧೈರ್ಯವಿಲ್ಲದೆ ದೂರವೇ ಉಳಿದವು. ಇಂತಹ ಮಹೋನ್ನತ ವ್ಯಕ್ತಿತ್ವವನ್ನು ರೂಪಿಸಿಕೊಂಡು ವಿನಯದ ಮೇರು ಪರ್ವತವೇ ಆಗಿದ್ದ ಕಕ್ಕಯ್ಯ, ಉಪ್ಪಿಟ್ಟವರನ್ನು ಕೊನೆಯ ವರಿಗೂ ಸ್ಮರಿಸುವ ಋಜು ಸ್ವಭಾವದವನು. ಈ ನೆಲದ ಸಂಸ್ಕೃತಿಯನ್ನು ಉಸಿರಾಗಿಸಿಕೊಂಡು ಎಲ್ಲರಿಗೂ ಬೇಕಾಗು ವಂತೆ ಬದುಕಿದ ಮಹಾಶರಣ.

ತಾನು ಆಧ್ಯಾತ್ಮಿಕ ಸಾಧನೆಯ ಮೆಟ್ಟಿಲುಗಳನ್ನೇರಲು ಕಾರಣನಾದ ವಿಶ್ವಜ್ಯೋತಿ ಬಸವಣ್ಣನವರನ್ನು ಅತ್ಯಂತ ವಿನೀತಭಾವದಿಂದ ಕೃತಜ್ಞತೆಯಿಂದ ಸ್ಮರಿಸಿದ್ದಾನೆ;

*ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು*
*ಮುಟ್ಟಿಪಾವನವ ಮಾಡಿ ಕೊಟ್ಟನಯ್ಯ*
*ಎನ್ನ ಕರಸ್ಥಲಕ್ಕೆ ಲಿಂಗವ, ಆ ಲಿಂಗ ಬಂದು ಸೋಂಕಲೊಡನೆ*
*ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ*
*ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ*
*ಎನ್ನ ಮನದಲ್ಲಿ ಜಂಗಮವ ನೆಲೆಗೊಳಿಸಿದ*
*ಎನ್ನ ಅರಿವಿನಲ್ಲಿ ಪ್ರಸಾದವ ನೆಲೆಗೊಳಿಸಿದ*
*ಇಂತೀ ತ್ರಿವಿಧ ಸ್ಥಾನವ ಶುದ್ಧವ ಮಾಡಿದ*
*ಬಸವಣ್ಣನ ಕರುಣದಿಂದ*

ತಮ್ಮ ಉನ್ನತಿಗೆ ಕಾರಣರಾದವರನ್ನು ನೆನೆಯುವುದು ಭಾರತೀಯ ಸಂಸ್ಕೃತಿಯ ದ್ಯೋತಕ. ಅಂತಹ ಸಂಸ್ಕೃತಿ ಯನ್ನು ಮೈಗೂಡಿಸಿಕೊಂಡು ಬದುಕಿದವ ಡೋಹರ ಕಕ್ಕಯ್ಯ, ಬಸವಣ್ಣನವರಲ್ಲಿ ಭಕ್ತಿ ಗೌರವವನ್ನಿಟ್ಟುಕೊಂಡಿ ದ್ದಲ್ಲದೆ, ಗುರುವನ್ನಾಗಿ ಸ್ವೀಕರಿಸಿದ್ದಾನೆ. ಅಂತೆಯೇ ತನ್ನ ಆತ್ಮೋನ್ನತಿಗೆ ಆಧ್ಯಾತ್ಮ ಚಿಂತನೆಗೆ ಬೆಳಕು ನೀಡಿದ ಮಹಾಶರಣ ಅನುಭಾವಿ ಅಲ್ಲಮಪ್ರಭುವನ್ನು ಅಷ್ಟೇ ಭಕ್ತಿ ಯಿಂದ ಸ್ಮರಿಸಿದ್ದಾನೆ.

*ಆಸೆಯಾಮಿಷವಳಿದು*
*ಹುಸಿವಿಷಯಂಗಳೆಲ್ಲ ಹಿಂಗಿ*
*ಸಂಶಯ ಸಂಬಂಧವಾಯಿತ್ತು ನೋಡಾ !*
*ಎನ್ನ ಮನದೊಳಗೆ ಘನ ಪರಿಣಾಮವ ಕಂಡು*
*ಮನ ಮಗ್ನವಾಯಿತ್ತಯ್ಯ !*
*ಅಭಿನವ ಮಲ್ಲಿಕಾರ್ಜುನಾ, ನಿಮ್ಮ ಶರಣ*
*ಪ್ರಭುದೇವರ ಕರುಣದಿಂದ ಬದುಕಿದೆ.*





ಆಸೆ ಅಮಿಷದ ಹುಸಿ ಸಂಶಯ– ಇವುಗಳನ್ನೆಲ್ಲಾ ದೂರವಾಗಿಸಿಕೊಳ್ಳಲು ಮಾರ್ಗದರ್ಶನ ನೀಡಿದ ವೈರಾಗ್ಯ ಮೂರ್ತಿ ಅನುಭಾವ ಜ್ಯೋತಿ ಪ್ರಭುದೇವರ ದಿವ್ಯಚರಣ ಗಳಿಗೆ ಭಕ್ತಿಯ ಕುಸುಮಾಂಜಲಿಯನ್ನು ಕಕ್ಕಯ್ಯ ಸಮರ್ಪಿಸಿದ್ದಾನೆ.

ಅಸ್ಪೃಶ್ಯಕುಲದಲ್ಲಿ ಹುಟ್ಟಿದ ತಪ್ಪಿಗೆ ದೇವರಿಂದ ದೂರ ವಾದೆನೆಂದು ಕೀಳರಿಮೆಯಿಂದ ಕಂಗೆಟ್ಟು ಮೂಲೆ ಗುಂಪಾಗಿದ್ದ ಈ ಶರಣ ಬಸವಣ್ಣ, ಪ್ರಭುದೇವ, ಚನ್ನಬಸವಣ್ಣ ಮೊದಲಾದ ಶರಣರ ಕರುಣದಿಂದ ಗುರುವಿನ ಅನುಗ್ರಹದಿಂದ ಇಷ್ಟಲಿಂಗಧಾರಿಯಾಗಿ ಭಕ್ತಕುಲಕ್ಕೆ ಸೇರಿದವ ನಾದ, ಗುರುವಿನ ಹಸ್ತಸ್ಪರ್ಶದಿಂದ, ಇಷ್ಟಲಿಂಗ ಧಾರಣೆಯ ಪರಿಣಾಮವಾಗಿ ಸ್ಪರ್ಶಶಿಲೆ ಸೋಂಕಿದ ಕಬ್ಬಿಣ ಚಿನ್ನವಾಗು ವಂತೆ ಕಕ್ಕಯ್ಯ ಶಿವಭಕ್ತನಾದ, ಪಾವನನೆನಿಸಿದ. ಅದನ್ನು ಆತ ತನ್ನ ವಚನದಲ್ಲಿ ಮನದುಂಬಿ ಹೇಳಿದ್ದಾನೆ.

ಶರಣರ ಕರುಣದಿಂದ ಹೀನಕುಲದವರ ಉದ್ಧಾರ ಹೇಗಾಯಿತು? ಶೋಷಣೆಗೆ ಒಳಗಾದ ಕೆಳವರ್ಗದವರು ಉತ್ತಮರ ಸರಿಸಾಟಿಯಾಗಿ ಬಾಳುವ ಸಮರಸದ ಬದುಕು ಹೇಗೆ ಸಾಧ್ಯವಾಯಿತೆನ್ನುವ ಅಪೂರ್ವ ಸನ್ನಿವೇಶಕ್ಕೆ ಕಕ್ಕಯ್ಯನ ಬದುಕು ಜ್ವಲಂತ ಉದಾಹರಣೆಯಾಗಿರುವುದನ್ನು ನಾವು ನೋಡಬಹುದು.

ತನ್ನ ಅಂತರಂಗದಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸಿ ಕೊಂಡ ಈ ಮಹಾನುಭಾವರು ಪರಮಸುಖಿಯಾದೆನೆಂದು ಹೇಳಿರುವ ವಚನವಿದು;

*ನೆನೆಯಲರಿಯೆ, ನಿರ್ಧರಿಸಲರಿಯೆ ಮನವಿಲ್ಲಾಗಿ*
*ಭಾವಿಸಲರಿಯೆ, ಬೆರೆಸಲರಿಯೆ ಭಾವ ನಿರ್ಭಾವವಾಗಿತ್ತಾಗಿ*
*ಧ್ಯಾನಮೌನವನರಿಯೆ, ಧ್ಯಾನಾತೀತ ತಾನೆಯಾಯಿತ್ತಾಗಿ*
*ಜ್ಞಾತೃಜ್ಞಾನ ಜ್ಞೇಯಂಗಳೆಲ್ಲವ ಮೀರಿ*
*ಅಭಿನವ ಮಲ್ಲಿಕಾರ್ಜುನಯ್ಯನಲ್ಲಿ ಪರಮಸುಖಿಯಾದೆನು.*

ಬಸವಾದಿ ಶರಣರು ನಡೆಸಿದ ಸಾಮಾಜಿಕ–ಧಾರ್ಮಿಕ ಚಳುವಳಿ ಪ್ರಗತಿ ಪಥದಲ್ಲಿ ಮುನ್ನಡೆಯುವುದನ್ನು ಕಂಡ ಕೆಲವು ಅಸೂಯಾಪರರು ಚಳುವಳಿಗೆ ಹಿನ್ನಡೆಯುಂಟಾಗು ವಂತೆ ಮಾಡಲು ಕೆಲವು ಅಹಿತಕರ ಘಟನೆಗಳು ನಡೆಯುವಂತೆ ಮಾಡಲು ಯಶಸ್ವಿಯಾದರು. ಈ ಅಹಿತಕರ ಬೆಳವಣಿಗೆಗಳಿಮ್ದ ಮನನೊಂದ ಬಸವಣ್ಣನವರು ಕಲ್ಯಾಣ ತೊರೆದು ಕೂಡಲಸಂಗಮದೇವನ ಸಾನ್ನಿಧ್ಯವನ್ನರಸಿ ಹೋದ ಮೇಲೆ ಕೆಲವು ಸಮಾಜಘಾತುಕರು ಶರಣ ಸಮುದಾಯದ ಮೇಲೆ ಸುಳ್ಳು ಆರೋಪಗಳನ್ನೊರಿಸಿ, ಸಮಾಜದಲ್ಲಿ ವಿಷಬೀಜ ಭಿತ್ತಿ ನೆಮ್ಮದಿಯ ವಾತಾವರಣ ವನ್ನು ಕಲಕಿ, ಅಶಾಂತಿಯ ಬಿರುಗಾಳಿ ಬೀಸುವಂತೆ ಮಾಡುವ ದುರುದ್ದೇಶದಿಂದ ಒಳಸಂಚು ಮಾಡಿ ರಾಜ ಬಿಜ್ಜಳನನ್ನು ಹತ್ಯೆಮಾಡಿ, ಇದಕ್ಕೆಲ್ಲ ಶರಣ ಸಮುದಾಯವೇ ಕಾರಣ ಎಂಬ ಸುಳ್ಳುವದಂತಿಯನ್ನು ಹರಡಿದರು. ಇದರಿಂದ ಕಲ್ಯಾಣದಲ್ಲಿ ಶರಣರು ಹಾಗೂ ಶರಣೇತರ ಗುಂಪುಗಳಾಗಿ ಹಲ್ಲೆ, ಪ್ರತಿ ಹಲ್ಲೆಗಳು ನಡೆಯಲಾರಂಭಿಸಿದವು. ಮುಂದೆ ಆಗಬಹುದಾದ ಅನಾಹುತವನ್ನು ತಪ್ಪಿಸುವ ದೃಷ್ಟಿಯಿಂದ ಚನ್ನಬಸವಣ್ಣ, ನಾಗಲಾಂಬಿಕೆ, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಮೊದಲಾದವರ ನೇತೃತ್ವದಲ್ಲಿ ಶರಣ ಸಮೂಹ ಅಮೂಲ್ಯ ವಚನ ಸಾಹಿತ್ಯದ ಕಟ್ಟುಗಳೊಡನೆ ಉಳವಿಯತ್ತ ಪ್ರಯಾಣ ಬೆಳೆಸಿತು. ಈ ಗುಂಪಿನಲ್ಲಿ ಶರಣ ಡೋಹರ ಕಕ್ಕಯ್ಯನೂ ಪ್ರಮುಖನಾಗಿದ್ದ. ಅವನು ಶಿವನ ಪರಮಭಕ್ತನಾಗಿದ್ದಂತೆ, ವೀರಭದ್ರನಂತೆ ಪರಾಕ್ರಮಿಯೂ ಆಗಿದ್ದ. ಅನ್ಯಾಯವಿದ್ದಡೆ, ಸತ್ಯದ ಉಳವಿಗಾಗಿ ಹೋರಾಟ ನಡೆಸುವ ಗಣಾಚಾರಿಯ ಕೆಚ್ಚೆದೆಯನ್ನು ಹೊಂದಿದ್ದ. ತನ್ನ ತೋಳು ಬಲದ ಶಕ್ತಿಯನ್ನು ಶತ್ರುಗಳಿಗೆ ತೋರಿಸಿ ಹಿಮ್ಮೆಟ್ಟಿಸುವಂತೆ ಮಾಡಿದ, ಒಟ್ಟಿನಲ್ಲಿ ಅವನು ಶರಣ ಸಮೂಹಕ್ಕೆ ಮಹಾಶಕ್ತಿಯಾಗಿ ರಕ್ಷಾಕವಚನಾಗಿದ್ದನು.

ಕಾತರವಳ್ಳಿಯ ಭಯಂಕರ ಕಾಳಗವಾದ ಮೇಲೆ ಚೆನ್ನಬಸವಣ್ಣ ನಾಗಲಾಂಬಿಕೆ, ಕಿನ್ನರಿ ಬೊಮ್ಮಯ್ಯ ಹಾಗೂ ಅವನ ಅನುಯಾಯಿಗಳು ಸುರಕ್ಷಿತವಾಗಿ ಉಳುವಿ ಸೇರುವಂತೆ ಮಾಡಲು ಕಕ್ಕಯ್ಯ ಕೆಲವು ಶರಣರೊಂದಿಗೆ ಕಕ್ಕೇರಿಯತ್ತ ತಿರುಗುವಂತೆ ವೈರಿಪಡೆಯನ್ನು ಇಬ್ಭಾಗ ಮಾಡಿ ಅವರೊಂದಿಗೆ ಕಲಿತನದಿಂದ ಹೋರಾಡಿ ಶರಣರನ್ನು ರಕ್ಷಿಸಿ, ಕಕ್ಕೇರಿಯಲ್ಲಿಯೇ ವೀರಮರಣ ಹೊಂದಿದನೆಂದು ತಿಳಿದು ಬರುತ್ತದೆ. ಈಗಲೂ ಬೆಳಗಾವಿ ಜಿಲ್ಲೆಯ ಕಕ್ಕೇರಿಯಲ್ಲಿ 'ಕಕ್ಕಯ್ಯನ ಕೆರೆ', 'ಕಕ್ಕಯ್ಯನಬಾವಿ' ಎಂಬ ಹೆಸರಿನ ಎರಡು ಜಲಾಶಯಗಳಿರುವುದು. ಜೊತೆಗೆ ಅಲ್ಲಿಯೇ ಕಕ್ಕಯ್ಯನ ಸಮಾಧಿಯಿರುವುದೆಂದು ತಿಳಿದು ಬಂದಿದೆ. ಶತ್ರು ಸೈನ್ಯವನ್ನು ಬೆಳಗಾವಿ ಬಳಿಯ ಕಕ್ಕೇರಿಯ ಕಡೆಗೆ ತಿರುಗಿಸಿ ತಾನು ಯುದ್ಧದಲ್ಲಿ ವೀರಮರಣ ಹೊಂದಿ ಶಿವಸಾಯುಜ್ಯವನ್ನು ಪಡೆದ ಕಕ್ಕಯ್ಯನ ಕೀರ್ತಿ ಕರ್ನಾಟಕ ಇತಿಹಾಸದಲ್ಲಿ ಅಜರಾಮರವಾಗಿದೆ. ☐



# ಜ್ಞಾನದಾ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ *

-ಡಾ|| ಆರ್.ಬಿ. ಚಿಲುಮಿ

ಮನುಷ್ಯಜನ್ಮ ಲಭಿಸುವುದು ದುರ್ಲಭ. ಅದೇನು ಪದೇ ಪದೇ ಬರುವಂತಹದ್ದಲ್ಲ. ಅದನ್ನು ಸಾರ್ಥಕ ಮಾಡಿ ಕೊಂಡು ಬದುಕುವುದೇ ಜೀವನ ಧರ್ಮವೆಂದಿದ್ದಾರೆ ಅನುಭಾವಿಗಳು. ಅಂದರೆ ಈ ಜೀವನವೆನ್ನುವುದು ಪರಮಾತ್ಮನು ನಮಗೆ ಕೊಟ್ಟಿರುವ ಸಿರಿ. ಅದನ್ನು ಅಭಿವೃದ್ಧಿಪಡಿಸುವ ಕಾರ್ಯ ಜ್ಞಾನಸಂಪಾದನೆ ಹಾಗೂ ಸಮಾಜಸೇವೆಯಿಂದ ಸಾಧ್ಯವಾಗುತ್ತದೆ. ವೈಚಾರಿಕ ಜೀವಿಯಾದ ಮಾನವನು ವಿದ್ಯೆ ಅಥವಾ ಜ್ಞಾನ ಸಂಪಾದಿಸಿಕೊಳ್ಳಲೇಬೇಕು. ಅದರಲ್ಲೂ ಇಂದಿನ ನಾಗಾಲೋಟದ ವೇಗದಲ್ಲಿದ್ದಾನೆ. ಐ.ಟಿ. ಬಿ.ಟಿ, ಕಂಪ್ಯೂಟರ್‌ಗಳ ಮಧ್ಯದಲ್ಲಿ ಬಾಳುತ್ತಿದ್ದಾನೆ. ಇವೆಲ್ಲ ಸೌಲಭ್ಯಗಳ ಅಡಿಯಲ್ಲಿರುವಾಗ ಕಲಿಯದಿದ್ದರೂ, ಕಲಿಯಲು ಹಚ್ಚುತ್ತವೆ. ಹಿಂದೆಂದಿಗಿಂತಲೂ ಇಂದು ಅತೀ ವೇಗದಲ್ಲಿ ಅಭಿವೃದ್ಧಿ ಹೊಂದುವ ಭಾಗ್ಯಶಾಲಿಯಾಗಿದ್ದಾನೆ. ಇಂಥ ಜ್ಞಾನದ ಜೊತೆ ಜೊತೆಗೆ ಗುರುಹಿರಿಯರು, ಋಷಿ ಮುನಿಗಳು ಬಿತ್ತಿದ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡು ಬದುಕಬೇಕಾಗಿದೆ. ಇಂಥ ಸೌಲಭ್ಯಗಳ ಮಹಿಮೆಯಿಂದ ಬೇಕಾದಷ್ಟು ಹಣ ಸಂಪಾದನೆ ಮಾಡಿಕೊಳ್ಳಬಹುದು. ಆದರೆ ಮಾನವೀಯತೆಯ ಗುಣಗಳನ್ನು ಹಾಳು ಮಾಡಿಕೊಳ್ಳ ಬಾರದು. ಕಂಪ್ಯೂಟರ್ ಕಲಿತಿದ್ದೇವೆಯೆಂದು ಖೋಟಾ ನೋಟುಗಳನ್ನು ಪ್ರಿಂಟ್ ಮಾಡಿ ಹಣ ಗಳಿಸಿದ ರೇನು ಬಂತು? ಇಂತಹ ಬದುಕು ಸಾಗಿಸುವುದಕ್ಕಿಂತಲೂ ಇಂಥವರಿಗೆ ಸಾವೇ ಮೇಲೆನ್ನಬೇಕು. ಅನ್ಯಾಯ-ಅಧರ್ಮದ ಹಾದಿ ತುಳಿಯುವವರು ಇದ್ದರೆಷ್ಟು? ಬಿಟ್ಟರೆಷ್ಟು! ಇಂಥವರಿಂದ ದೇಶಕ್ಕೆ ಗಂಡಾಂತರ.

ಭಾರತದೇಶ ಪ್ರಪಂಚದಲ್ಲಿಯೇ ಜ್ಞಾನ, ಧನ, ಧಾನ್ಯ ನೀತಿ ಧರ್ಮಕ್ಕೆ, ದೇವರು-ಧರ್ಮಕ್ಕೆ, ಆತ್ಮಜ್ಞಾನದಂತಹ ಆಧ್ಯಾತ್ಮಕ್ಕೆ, ವಿದ್ಯೆ-ತರ್ಕಕ್ಕೆ, ತತ್ವಶಾಸ್ತ್ರ- ನೀತಿಶಾಸ್ತ್ರಕ್ಕೆ ಶಿಲ್ಪ ಕಲೆಯ ಬೆಡಗಿಗೆ, ಸಂಸ್ಕೃತಿ ಪರಂಪರೆಗೆ ಹೆಸರುವಾಸಿ ಯಾದುದು. ಇಂತಹ ನೀತಿಯ ಚೌಕಟ್ಟಿನಲ್ಲಿಯೇ ಬಾಳಿ ಬೆಳಗಿದ ದೇಶವೆಂದು ಕೀರ್ತಿ ಹೊಂದಿದೆ. ಹೀಗಾಗಿ ಎಲ್ಲ ಪರಕೀಯರು ನಮ್ಮ ನಾಡು-ದೇಶಕ್ಕೆ, ಪದೇ ಪದೇ ಆಗಮಿಸಿ ಜ್ಞಾನ ಸಂಪಾದನೆಗೆ ಮುಂದಾಗುತ್ತಿದ್ದಾರೆ. ಮೊನ್ನೆ ಮೊನ್ನೆಯೇ ಅಮೇರಿಕಾದ ಅಧ್ಯಕ್ಷ ಒಬಾಮಾ ಪತ್ನಿ ಸಮೇತವಾಗಿ ಮುಂಬಯಿಯ ತಾಜ್ ಹೋಟೆಲಿಗೆ ಆಗಮಿಸಿದ್ದುದು ಹಚ್ಚ ಹಸಿರು. ಆತನೇ ಹೇಳಿದ್ದು - ಜ್ಞಾನ ದಾಹವುಳ್ಳವರು, ಜ್ಞಾನ ಸಂಪಾದನೆಗೆ ಭಾರತ ದೇಶಕ್ಕೆ ಬರಬೇಕು ಎಂಬುದಾಗಿ ಮನದಾಳದ ಮಾತು ನುಡಿದಿದ್ದಾನೆ. ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ!

ಜ್ಞಾನಕ್ಕೆ ಇನ್ನೊಂದು ಪದ ವಿದ್ಯೆ. ಇದು ಕಲಿಕೆಯಿಂದ ಬರುವಂತಹುದ್ದು. ಮನುಷ್ಯ ವಿದ್ಯೆ ಸಂಪಾದನೆಗೆಂದು ಸತತ ಪ್ರಯತ್ನ ಮಾಡಬೇಕಾಗುತ್ತದೆ. ಅದೇ ತಾನೆ ಜನ್ಮತಳೆದ ಮಗು ಅಂಬೆಗಾಲಿಕ್ಕಿ ನಡೆ ಕಲಿತು ನುಡಿ ಕಲಿಯುತ್ತಿದ್ದಂತೆ; ತಂದೆ-ತಾಯಿ, ಗುರು-ಹಿರಿಯರು ತಂತಮ್ಮ ಮನೆಗಳಲ್ಲಿ ಆ ಮಗುವಿಗೆ ಕಲಿಸುತ್ತಾರೆ, ಪಾಲನೆ, ಪೋಷಣೆ ಮಾಡುತ್ತಾರೆ. ಆ ಮಗು ಬೆಳೆ ಬೆಳೆದು ದೊಡ್ಡದಾಗುತ್ತಿದ್ದಂತೆಯೇ ಒಳ್ಳೆಯ ಗುರು-ಹಿರಿಯರ ಪಾಲನೆಯಲ್ಲಿ ಬೆಳೆದರೆ ಅದುವೇ ಮುಂದೆ ಸತ್ಪ್ರಜೆಯಾಗಿ ದೇಶಕ್ಕೆ ಕೀರ್ತಿ ತರಬಲ್ಲ ಮಹಾವ್ಯಕ್ತಿಯಾಗಬಲ್ಲ. ಅಂದರೆ ಮನೆಯೇ ಮೊದಲ ಪಾಠಶಾಲೆ ಎಂಬಂತೆ. ಒಳ್ಳೆಯ ಮನೆತನ, ಮಾನವರ ಪರಿಸರದ ಬಳಕೆಯೇ ಮುಗ್ಧ ಮಗುವಿನ ಮೇಲೆ ಪರಿಣಾಮ ಬೀರುತ್ತದೆ. ಇದಕ್ಕೆ ಸರ್ವಜ್ಞನ ವಚನದ ಸಾಲುಗಳನ್ನು ಗಮನಿಸಬಹುದು

***ವಿದ್ಯೆವುಳ್ಳವನ ಮುಖವು ಮುದ್ದು ಬರುವಂತಿಕ್ಕು***
***ವಿದ್ಯೆಯಿಲ್ಲದವನ ಬರಿ ಮುಖವು - ಹಾಳೂರ***
***ಹದ್ದಿನಂತಿಕ್ಕು ಸರ್ವಜ್ಞ!***

ಅಂದರೆ ಜ್ಞಾನ ಸಂಪಾದಿತ ವ್ಯಕ್ತಿಯ ಮುಖವು ಚಂದ್ರನಂತೆ ಕಳೆಯೇರುತ್ತದೆ, ಮುದ್ದು ಬರುವಂತಿರುತ್ತದೆ. ಆದರೆ ವಿದ್ಯೆ ಯಿಲ್ಲದವನ ಮುಖವು ಹಾಳುಬಿದ್ದ ಊರಿನ ಹದ್ದಿನಂತಹ ಮುಖವಾಗಿರುತ್ತದೆಯೆನ್ನುವ ಸರ್ವಜ್ಞನ ನುಡಿ ನಮಗದು ನೈವೇದ್ಯವೇ ಸರಿ!. ಸರ್ವಜ್ಞನು ಅಂದು ಹೇಳಿದ ಮಾತು ಅಕ್ಷರ ದಾಸೋಹ, ನಲಿ-ಕಲಿ ಮತ್ತು ಹುಟ್ಟಿದ ಪ್ರತಿಯೊಂದು ಮಗುವಿಗೆ ಕಡ್ಡಾಯ ಶಿಕ್ಷಣದ ನೀತಿಯ ಪಾಠವನ್ನು ಹೇಳಿದಂತಿದೆ. ಯಾವುದೇ ತರಹದ ವಿದ್ಯೆ ಅಥವಾ ಜ್ಞಾನವಿದ್ದರೆ ಮಾತ್ರ ಉಪಾಯದಿಂದ ದುಡಿಯ ಬಲ್ಲೆವು ಎಂಬ ತಿರುಳೂ ಇದರಲ್ಲಿದೆ.

* ಎಸ್.ವ್ಹಿ.ಇ.ಎಸ್. ಸ್ನಾತಕೋತ್ತರ ಕೇಂದ್ರ, ಹಾರೋಗೇರಿ, ರಾಯಭಾಗ ತಾ||, ಬೆಳಗಾವಿ ಜಿಲ್ಲೆ-೫೯೧ ೨೨೦.







ಹಿಂದಿನ ತಲೆಮಾರಿನ ಜನರು ಕೋಟೆ-ಕೊತ್ತಲು, ಕೆರೆ, ಬಾವಿ, ಷಡ್ಡುಗಳನ್ನು ನಿರ್ಮಿಸಲು ಅದೆಷ್ಟು ಜನಶಕ್ತಿಯನ್ನು ಬಳಸಿಕೊಳ್ಳುತ್ತಿದ್ದರು! ಅದರಿಂದು ಯಂತ್ರೋಪರಣಗಳ ಬಳಕೆಯಿಂದ, ಕೆಲವೇ ಕೆಲವು ವ್ಯಕ್ತಿಗಳಿಂದ ಬೇಕಾದಂತಹ ಬೆಟ್ಟದಷ್ಟಿರುವ ಕಾರ್ಯವನ್ನು ಸರಾಗವಾಗಿ, ಕ್ಷಣಮಾತ್ರದಲ್ಲಿ ನಿರ್ಮಿಸಬಲ್ಲರು, ಇದು ಸಾಧಿಸಿದ್ದು ಜ್ಞಾನ ಸಂಪಾದನೆ ಯಿಂದಲೇ ಅಲ್ಲವೆ? ಅದೆಷ್ಟು ಅಭಿಯಂತರರು, ವೈದ್ಯರುಗಳು, ವಿಜ್ಞಾನಿಗಳು, ಇನ್ನಿತರ ತಂತ್ರಜ್ಞಾನಿಗಳು ನಮ್ಮ ದೇಶವನ್ನಲ್ಲದೆ ಪರರಾಷ್ಟ್ರಗಳಲ್ಲಿಯೂ ಹೆಸರು ಮಾಡಿಲ್ಲವೆ? ಲಂಡನ್, ಜಪಾನ್, ಜರ್ಮನ್, ಅಮೇರಿಕ ಮುಂತಾದ ರಾಷ್ಟ್ರಗಳಲ್ಲಿ ಇಂಥ ಕಲೆಗಾರಿಕೆಯ ತಂತ್ರಜ್ಞಾನಿಗಳೇ ತುಂಬಿದ್ದಾರೆ. ಇವರಿಗೆ ಇವರನ್ನು ಬಿಟ್ಟು ಗತಿಯಿಲ್ಲ ಎಂಬಂತಿದೆ. ಅಂದರೆ ಜ್ಞಾನವಿದ್ದರೆ ಎಲ್ಲಿ ಬೇಕಾದಲ್ಲಿ ಆತಂಕವಿಲ್ಲದೇ ಬದುಕಬಲ್ಲ ಎಂಬುದಕ್ಕೆ ನಿದರ್ಶನ! ಜ್ಞಾನ ಸಂಪಾದನೆಗೆ ಪರಿಸರದ ಹಿನ್ನಲೆಯಷ್ಟೇ ಇದ್ದರೆ ಸಾಲದು, ಸತತ ಪರಿಶ್ರಮ, ಪ್ರಯತ್ನಗಳೂ ಮುಖ್ಯ ಕಾರಣ, ಯಾರೇ ಆಗಲಿ, ಯಾವುದೇ ಕ್ಷೇತ್ರದಲ್ಲಾಗಲಿ ತಾನು ಬೆಳೆಯಬೇಕಾದರೆ, ಜ್ಞಾನ ಸಂಪಾದನೆಗೋಸ್ಕರ ಕೀಳರಿಮೆ, ತರತಮ ಭಾವನೆ ತಾಳಬಾರದು; ಎಲ್ಲರೊಳಗೊಂದಾಗಿ ಒಡಬೆರೆತು ಕಲಿಯ ಬೇಕು, ನಲಿಯಬೇಕು. **'ವಿದ್ಯೆ ವಿನಯೇನ ಶೋಭತೆ'** ಎಂಬ ವಾಕ್ಯಕ್ಕೆ ಬದ್ಧನಾಗಿ ನಡೆದುಕೊಳ್ಳಬೇಕು. ಬೆಳೆಯುವಂಥ ವ್ಯಕ್ತಿ ಕೀಳರಿಮೆ ಬಿಟ್ಟು, ಗಟ್ಟಿ ಬಯಕೆ ಮತ್ತು ದೃಢ ಸಂಕಲ್ಪಗಳನ್ನು ಮೈಗೂಡಿಸಿಕೊಳ್ಳಬೇಕು. ಇದುವೇ ನಿಜವಾಗಿಯೂ ಆರೋಗ್ಯವಂತ ಸಮಾಜದ ನಿರ್ಮಾಣಕ್ಕೆ ಸಹಾಯ- ಸಹಕಾರ ಮಾಡಿದಂತಾಗುತ್ತದೆ.

ಜ್ಞಾನ ಪರಬ್ರಹ್ಮಂ, ಜ್ಞಾನದಿಂದಲೇ ಬಂಧನ, ಇಡೀ ಜಗತ್ತು ಜ್ಞಾನ ಸ್ವರೂಪ, ಜ್ಞಾನವನ್ನು ಬಿಟ್ಟು ಬೇರೇನೂ ಇಲ್ಲವೆಂದಿದೆ ವಿಷ್ಣುಪುರಾಣ. ವಿದ್ಯೆಯನ್ನು ವಿನಯದಿಂದಲೇ ಕಲಿಯಬೇಕು ಮತ್ತು ಕಲಿತ ವಿದ್ಯೆಯನ್ನು ಅಷ್ಟೇ ವಿನಯದಿಂದಲೇ ಬೋಧನೆಯಾಗಬೇಕು. ಅಂತೆಯೇ ಸರ್ವಜ್ಞನು ಹೇಳಿದ್ದು ಹೀಗೆ -

***ವಿದ್ಯೆಯೇ ತಾಯ್ತಂದೆ, ಬುದ್ಧಿಯೇ ಸೋದರನು***
***ಅದ್ವಾನಕಾದರವ ನೆಂಟ ಸುಖದಿ - ತಾ***
***ನಿದ್ದುದೇ ರಾಜ್ಯ - ಸರ್ವಜ್ಞ!***

ಸದ್ವಿದ್ಯೆಯೇ ಮಾನವನಿಗೆ ತಾಯಿ-ತಂದೆ, ಬಂಧು-ಬಳಗ, ಸರ್ವಸ್ವವೂ ಆಗಿದೆ. ಜ್ಞಾನಕ್ಕಿಂತಲೂ ಮಿಗಿಲಾದ ವಸ್ತು ಇನ್ನೊಂದಿಲ್ಲ ಹಾಗೂ ಸದ್ಬುದ್ಧಿಗಿಂತಲೂ ಮಿಗಿಲೆನಿಸಿದ ಸೋದರನು ಇನ್ನೊಬ್ಬನಿಲ್ಲ. ಅದು ಹೇಗೆಂದರೆ ಆಪತ್ಕಾಲಕ್ಕಾದವನೇ ನಿಜವಾದ ನೆಂಟನೆಂಬಂತೆ. ಇವೆರಡರ ಆಸರೆಯಲ್ಲಿರುವ ಮಾನವನು ಯಾವುದೇ ದೇಶಕಾಲ ದಲ್ಲಿದ್ದರೂ ಸುಖಜೀವನವನ್ನು ಸಾಗಿಸಬಲ್ಲನು. ಆದುದರಿಂದ ಪ್ರತಿಯೊಬ್ಬನೂ ವಿದ್ಯೆ ಅಥವಾ ಜ್ಞಾನ ಸಂಪಾದಿಸಿ ಕೊಳ್ಳಲೇಬೇಕು. ತಂದೆ-ತಾಯಿ, ಗುರು-ಹಿರಿಯರು, ಪಾಲಕರು, ತಂತಮ್ಮ ಮಕ್ಕಳು ಮೊಮ್ಮಕ್ಕಳಿಗೆ ವಿದ್ಯೆಯನ್ನು ಕಲಿಸಲೇಬೇಕು, ಕೊಡಿಸಲೇಬೇಕು. ಇದಕ್ಕಾಗಿ ಸರ್ವಜ್ಞನು ತನ್ನದೊಂದು ವಚನದಲ್ಲಿ ಬೋಧಿಸಿದ್ದು ಹೀಗೆ-

***ವಿದ್ಯೆ ಕಲಿಸದ ತಂದೆ, ಬುದ್ಧಿ ಹೇಳದ ಗುರುವು***
***ಬಿದ್ದಿರಲು ಬಂದು ನೋಡದ ತಾಯಿ - ಇವರುಗಳು***
***ಶುದ್ಧ ವೈರಿಗಳು ಸರ್ವಜ್ಞ!***

ಅಂದರೆ ಮೇಲೆ ಹೇಳಿದಂತೆ ಅವರವರ ಮಕ್ಕಳು ಮೊಮ್ಮಕ್ಕಳುಗಳಿಗೆ ಬಾಲ್ಯದಲ್ಲಿ ಅಕ್ಕರೆಯಿಂದ ವಿದ್ಯೆಯನ್ನು ಕಲಿಸಲಾರದ ತಂದೆ, ಮೂರ್ಖನೆನಿಸುವ ಶಿಷ್ಯನಿಗೆ ಬುದ್ಧಿಯ ಮಾತನ್ನೇ ಹೇಳಲಾರದ ಗುರುವು, ಕಷ್ಟದಲ್ಲಿ ಕಾಯಿಲೆಯಿಂದ ನರಳುತ್ತ ಬಿದ್ದಾಗಲೂ ಬಂದು ನೋಡಲಾರದ, ಉಪಚಾರ ಮಾಡಲಾರದ ತಾಯಿ ಇವರೆಲ್ಲರೂ ಕಡುವೈರಿಗಳೇ ಎಂಬುದಾಗಿ ಸರ್ವಜ್ಞನು ಟೀಕಿಸಿರುವುದನ್ನು ಗಮನಿಸಬೇಕು. ಜ್ಞಾನಿಯಾದವನಿಗೆ ಮೊಗವು ಮುದ್ದು ಬರುವಂತಿರುತ್ತದೆ. ಅಂಥ ಜ್ಞಾನಿಯಲ್ಲಿ ಮೋಹ-ಮಮಕಾರ ಗುಣಗಳು ಬರಲಾರವು, ಬರಲೇ ಬಾರದು! ನಾನು ವೇದಾಗಮ ಶಾಸ್ತ್ರ ಪುರಾಣದಂತಹ ಗ್ರಂಥಗಳನ್ನೋದಿ ಪಂಡಿತನೆನಿಸಿಕೊಂಡಿ ದ್ದೇನೆಂದು ಬೀಗಬಾರದು. ಸಮರಸದ ಬದುಕು ಆತನದಾಗಿರಬೇಕು. ಕೇವಲ ಗೊತ್ತು ಗುರಿಯಿಲ್ಲದೆ ವೇದಾಗಮ ಶಾಸ್ತ್ರ ಗ್ರಂಥಗಳನ್ನು ಓದಿ ಪಂಡಿತನೆನಿಸುವುದ ರಿಂದ ಯಾವ ಲಾಭವೂ ಇಲ್ಲ. ಜನ ಹಿತಕಾರಿ ಕೆಲಸಗಳನ್ನೂ ಮಾಡಬೇಕು. ಆತನು ಚಂಚಲ ಚಿತ್ತವನ್ನು ಅತ್ತಿತ್ತ ಹರಿಯಬಿಡದೆ, ತನ್ನ ಸ್ವಾಧೀನದಲ್ಲಿದ್ದುಕೊಂಡು ಜ್ಞಾನ ಹಾಗೂ ಮನಸ್ಸನ್ನು ಸಮವಾಗಿರಿಸಿಕೊಂಡು ಹೋಗಬೇಕಾಗುತ್ತದೆ. ಅಂದರೆ ಯಾವಾತನು ಜ್ಞಾನ ಸಂಪಾದನೆ ಮಾಡಿಕೊಂಡು ದಿಟ್ಟತನದಿಂದ ಸಂಸಾರ ಸಾಗರದಲ್ಲಿ ಈಜುತ್ತಲೇ ತನ್ನ ಕೊನೆ ಉಸಿರು ಇರುವವರೆಗೂ ಸನ್ಮಾರ್ಗ-ಸತ್ಪಥದಲ್ಲಿ ಸಾಗುತ್ತಿರುತ್ತಾನೋ ಅಂಥವನು ತಾಪತ್ರಯಗಳಿಂದ ಪಾರಾಗಿ ಐಕ್ಯನಾಗುವನೆಂದು ಹೇಳಿದ ಆಧ್ಯಾತ್ಮವಾದಿಗಳ-ವೇದಾಂತಿ ಗಳ ನುಡಿಗಡಣವು ನಿತ್ಯ ಸತ್ಯ!!.

❑

## ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆಗಾಗಿ 'ಮಾನವ ಹಕ್ಕುಗಳು' *

-ಸ.ರಾ. ಸುಳಕೂಡೆ

**'ಸರ್ವೇಜನಾಃ ಸುಖಿನೋಭವಂತು'**, **'ಮಾನವಕುಲ ಒಂದೇ ವಲಂ'** ಎಂಬ ವಿಶಾಲತೆಯೇ ಮಾನವ ಸ್ವಾತಂತ್ರ್ಯ ಮತ್ತು ಸಮಾನತೆಯ ತಳಹದಿಯಾಗಿದೆ. ಇವನಾರವ, ಇವನಾರವ ಎನ್ನದೇ ಇವನಮ್ಮವ, ಇವನಮ್ಮವ ಎನ್ನುವುದೇ ಮಾನವಹಕ್ಕು ಮತ್ತು ಮಾನವೀಯ ನಡತೆಯಾಗಿದೆ. ಇದನ್ನೇ ಆಧುನಿಕ ಚಿಂತಕ ಹೆಚ್.ವಿ. ಲಾವಿಸ್ಸ ಅವರು ಹೀಗೆ ಹೇಳಿದ್ದಾರೆ – 'ಒಬ್ಬನ್ನೊಬ್ಬರು ಅರಿತು ಜನಾಂಗದ ಭಿನ್ನತೆಯನ್ನು ಮರೆತು ಹಾಗೂ ಸಂಕುಚಿತ ಸಂಸ್ಕೃತಿಯಿಂದ ದೂರ ನಿಂತು ಜಗತ್ತಿನ ಮಾನವರೆಲ್ಲಾ ಒಂದೇ ಅನ್ನುವ ಭ್ರಾತೃತ್ವ ಬೆಳೆಸಿಕೊಳ್ಳುವುದು ಅಗತ್ಯ; ಮಾನವನು ಎಂದಿನಂತೆ ಇಂದೂ ತನ್ನ ವ್ಯಕ್ತಿತ್ವವನ್ನು ಸಂಕುಚಿತ ವಿಷಯದಲ್ಲಿಯೇ ತಲ್ಲೀನಗೊಳಿಸಿಕೊಂಡರೆ ಅವನ ಭವಿಷ್ಯವು ಅಷ್ಟು ಅಂಧಕಾರಕ್ಕೆ ತಿರುಗುತ್ತದೆಂದು ಹೇಳಬೇಕಾಗುತ್ತದೆ.

ಜಗತ್ತಿನ ಅವಿರಳ ಸಂತತಿಗಳಲ್ಲಿಯೇ 'ಮಾನವನ ಜನನ'ವು ಪ್ರಮುಖವಾಗಿದೆ. ನಮ್ಮ ಜಗತ್ತಿಗೊಂದು ಅರ್ಥ ಕಲ್ಪಿಸಿಕೊಳ್ಳುವುದೇನೆಂದರೆ ಮಾನವ-ಮಾನವರಲ್ಲಿ ನಂಬಿಕೆ, ವಿಶ್ವಾಸ, ಸಹಬಾಳ್ವೆ ಸಾಧಿಸುವುದಾಗಿದೆ. ಮೂಲಭೂತವಾಗಿ ಮಾನವನ ಬದುಕಿಗೊಂದು ಸದೃಢ ನಿಲುವು ತಾಳುವ ಭರವಸೆಯಿಂದಲೇ ಮಾನವ ಹಕ್ಕುಗಳು ಪ್ರಚಲಿತಕ್ಕೆ ಬಂದಿವೆ. ಈ ಹಕ್ಕುಗಳು ಮಾನವೀಯ ಸಂಬಂಧಗಳನ್ನು ಸುಮಧುರಗೊಳಿಸುವ ಸದಾಶಯ ಹೊಂದಿವೆ.

ಮನುಷ್ಯನ ಬದುಕಿನಲ್ಲಿ ನುಸುಳುತ್ತಿರುವ ಅಮಾನುಷ್ಯ-ರಾಕ್ಷಸ-ಭಯಾನಕ-ಹಿಂಸಾತ್ಮಕ ಮನೋಧರ್ಮಗಳೊಂದಿಗೆ ಶೋಷಣೆ-ದಬ್ಬಾಳಿಕೆ-ಗುಲಾಮಗಿರಿ ಮತ್ತು ಮೇಲು-ಕೀಳಿನ ಜಂಜಡಗಳನ್ನು ಬಿಡಿಸಿಕೊಳ್ಳುವ ಅನಿವಾರ್ಯತೆಯ ಸವಾಲು ನಮ್ಮ ಮುಂದಿದೆ. **'ನಾನು ಎಲ್ಲರಿಗಾಗಿ, ಎಲ್ಲರೂ ನನಗಾಗಿ'** ಎಂಬ ಸಹಕಾರ ತತ್ತ್ವ ಪಸರಿಸುವ ಕಾರ್ಯದಲ್ಲಿ ಮಾನವ ಹಕ್ಕುಗಳು ಸಹಕಾರಿಯಾಗಿವೆ. ಸಮಾಜ ಜೀವಿಯಾಗಿರುವ ಮಾನವನ ಭವಿಷ್ಯವು ಉಜ್ವಲಗೊಳಿಸುವುದೇ ಮಾನವ ಬದುಕಿನ ಗುರಿಯಾಗಿದೆ. ೧೯೪೮ರ ಡಿಸೆಂಬರ್‌ನಲ್ಲಿ ನಡೆದ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯಂತೆ ಮಾನವ ಹಕ್ಕುಗಳು ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿ ಗೌರವದೊಂದಿಗೆ ಸಮ್ಮಿಳತವಾಗಿರುತ್ತವೆ. ಅದಕ್ಕಾಗಿ ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆಗಳನ್ನು ನಿರಾಕರಿಸಲಾಗುವುದಿಲ್ಲ ಎಂದು ಸ್ಪಷ್ಟಪಡಿಸಿರುವ ಸಾಮಾನ್ಯ ಸಭೆಯು 'ಮಾನವ ಹಕ್ಕುಗಳನ್ನು ಪ್ರೋತ್ಸಾಹಿಸುವುದು ಮತ್ತು ಗೌರವಿಸುವುದರ ಜೊತೆಗೆ ಭಾಷೆ, ಬಣ್ಣ, ಧರ್ಮ, ಜಾತಿ-ಜನಾಂಗ ಲಿಂಗಗಳ ತಾರತಮ್ಯವಿಲ್ಲದೆ ವ್ಯಕ್ತಿ ಸ್ವಾತಂತ್ರ್ಯವನ್ನು ಕಾಪಾಡುವುದು ಅಗತ್ಯವೆಂದು ಘೋಷಿಸಿದೆ. ಮಾನವ ಹಕ್ಕುಗಳ ಒಡಂಬಡಿಕೆಗೆ ಸಹಿ ಹಾಕಿದ ರಾಷ್ಟ್ರಗಳಲ್ಲಿ ಭಾರತವು ಒಂದಾಗಿದೆ.

**'ಮಾನವ ಹಕ್ಕುಗಳು'** ಸರ್ವರಿಗೂ ದಕ್ಕಬೇಕಾದರೆ ಸರ್ವರ ನಡಾವಳಿಗಳು ಮಾನವೀಯ ಮೌಲ್ಯ ಕಾಪಾಡುವಂತೆ ಇರಬೇಕಾಗುತ್ತದೆ. ಮಾನವ-ಮಾನವರಲ್ಲಿ ಮಾನವ ಹಕ್ಕುಗಳು ಪ್ರಚಲಿತದಲ್ಲಿರಲು ನಿರ್ವಹಿಸಬೇಕಾಗಿರುವ ಹಲವು-ಹತ್ತು ವಿಧಾಯಕ ಕರ್ತವ್ಯಗಳು ಇಂತಿವೆ.

### ಸರ್ವರಿಗೂ ಶಿಕ್ಷಣ

ಪ್ರತಿಯೊಬ್ಬರು ತಮ್ಮ ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸಿಕೊಳ್ಳುವುದು ಅಗತ್ಯ. ತಿಳುವಳಿಕೆಯೇ ಮಾನವೀಯ ಮೌಲ್ಯಕ್ಕೆ ತಳಹದಿಯಾಗಿದೆ. ಮಾನವನಲ್ಲಿರುವ ಅಜ್ಞಾನ, ಸ್ವಾರ್ಥತನ, ಪರಿಶ್ರಮವಿಲ್ಲದೆ ಪ್ರತಿಫಲ ಪಡೆಯುವಿಕೆ. ಮೋಸ-ವಂಚನೆಯಿಂದ ಸಂಪಾದನೆ, ಜಾತಿಯ ಗರ್ವ ಪ್ರದೇಶದ ಗರಿಮೆ ಅಂಧಾನುಕರಣೆ, ಕಾನೂನು ಬಾಹಿರ ಕೆಲಸ-ಕಾರ್ಯಗಳು ಮಾನವ ಹಕ್ಕುಗಳನ್ನು ಹಿನ್ನಡೆಸುತ್ತವೆ. ಇಂಥ ಅವೈಜ್ಞಾನಿಕ, ಅಲೌಕಿಕ, ಪರಾವಲಂಬಿ ನಡೆ-ನುಡಿಗಳು ಮನುಷ್ಯನಲ್ಲಿ ಕರಗತಗೊಳ್ಳದಂತೆ ತಡೆಯುವುದೇ ತಿಳುವಳಿಕೆ ಹೊಂದುವುದಾಗಿದೆ. ಯಾವ ಪ್ರದೇಶದಲ್ಲಿ

* 1319, ರಾಮತೀರ್ಥನಗರ, ಬೆಳಗಾವಿ -16.





ಕರಗತಗೊಳ್ಳದಂತೆ ತಡೆಯುವುದೇ ತಿಳುವಳಿಕೆ ಹೊಂದುವುದಾಗಿದೆ. ಯಾವ ಪ್ರದೇಶದಲ್ಲಿ ತಿಳುವಳಿಕೆಯ ಮಟ್ಟವು ಗರಿಷ್ಟ ಮಟ್ಟದಲ್ಲಿ ಇರುತ್ತದೆಯೇ ಅಲ್ಲಿ ಸಮಾನತೆ, ಸೌಹಾರ್ದತೆ, ಅದರ ಅನುಕೂಲ ಸಹಕಾರಗಳೆಲ್ಲವು ಚಲನಶೀಲವಾಗಿರುತ್ತವೆ. ಇವೇ ಮಾನವ ಹಕ್ಕುಗಳಾಗಿ ಸಾರ್ವತ್ರಿಕ ಸುಖ-ಶಾಂತಿ-ನೆಮ್ಮದಿಗೆ ತಳಹದಿಯಾಗಿ ನಿಲ್ಲುತ್ತವೆ. ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸುವ ಏಕೈಕ ಮಾರ್ಗ. ಸರ್ವರೂ ಸುಶಿಕ್ಷಿತರಾಗುವುದು ಮತ್ತು ಸುಶಿಕ್ಷಿತರಂತೆ ವರ್ತಿಸುವುದಾಗಿದೆ. ಶಿಕ್ಷಣವು ಮಾನವ ಹಕ್ಕುಗಳನ್ನು ಚಾಲ್ತಿಗೆ ತರುವ ಸಾಧನವಾಗಿದೆ. ಇಂದು ಎಲ್ಲೆಡೆಯೂ ಸುಶಿಕ್ಷಿತ ಜನರು ಹೆಚ್ಚಾಗಿದ್ದಾರೆ. ಇವರೆಲ್ಲರೂ ಸಾಕ್ಷರರಾಗದವರನ್ನು ಗುರುತಿಸಿ ಸುಶಿಕ್ಷಿತರಾಗುವಂತೆ ಮಾಡಬೇಕು. ಸರ್ವರೂ ಶಿಕ್ಷಣದ ಆಯಾಮಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡಷ್ಟು, ಮಾನವ ಹಕ್ಕುಗಳು ಸಮಾಜದ ಅಂಗವಾಗಿ ನಿಲ್ಲುತ್ತವೆ.

### ಸರ್ವರಿಗೂ ಉದ್ಯೋಗ

ಉದ್ಯೋಗವು ಸರ್ವ ಅನಿಷ್ಟಗಳನ್ನು ಪರಿಹರಿಸುವ ಮತ್ತು ಮನುಷ್ಯತ್ವ ಬೆಳೆಸುವ ಸಾಧನವಾಗಿದೆ. ಉದ್ಯೋಗವು ಜೀವನ ನಿರ್ವಹಣೆಯನ್ನು ಸಾರ್ಥಕಗೊಳಿಸುತ್ತದೆ. ಸ್ವಾವಲಂಬಿ ಬದುಕು ಮಾನವ ಹಕ್ಕಿನ ತಿರುಳಾಗಿದೆ. ಮಾನವ ಹಕ್ಕು ಸರ್ವತ್ರ ಬೆಳಗಬೇಕಾದರೆ ಸಕಲರೂ ಒಂದಿಲ್ಲೊಂದು ಉದ್ಯೋಗದಲ್ಲಿ ತೊಡಗಿಕೊಂಡಿರಬೇಕಾಗುತ್ತದೆ. ಇಂದು ಜಗತ್ತಿನ ಬಹುರಾಷ್ಟ್ರಗಳಲ್ಲಿ ಅದರಲ್ಲಿ ಅಭಿವೃದ್ಧಿ ಹೊಂದದ ದೇಶಗಳಲ್ಲಿ ನಿರುದ್ಯೋಗ ತಾಂಡವ ರೂಪದಲ್ಲಿದೆ. ಇದು ಮಾನವ ಹಕ್ಕುಗಳನ್ನು ನಿಭಾಯಿಸುವಲ್ಲಿ ತೊಡಕಾಗಿ ನಿಂತಿದೆ. ಜನಪರ ಸರ್ಕಾರಗಳು ತಮ್ಮ ಪ್ರಣಾಳಿಕೆಯಲ್ಲಿ ಉದ್ಯೋಗ ನೀಡಿಕೆಗೆ ಪ್ರಾಧಾನ್ಯತೆ ಕೊಡುತ್ತವೆ. ಭಾರತದ ಗ್ರಾಮೀಣ ಭಾಗದಲ್ಲಿ ನಿರುದ್ಯೋಗವನ್ನು ಹೋಗಲಾಡಿಸಿ ಪ್ರತಿ ಕುಟುಂಬಕ್ಕೆ ಆರ್ಥಿಕ ಭದ್ರತೆ ಒದಗಿಸಲು ಮಹಾತ್ಮಾಗಾಂಧೀ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಈ ಯೋಜನೆ ಪ್ರತಿ ಕುಟುಂಬಕ್ಕೆ ಪ್ರತಿವರ್ಷ ನೂರು ದಿನಗಳ ಉದ್ಯೋಗ ನೀಡುವ ಭರವಸೆ ಕೊಡುತ್ತಲ್ಲದೆ ಅರ್ಜಿ ಸಲ್ಲಿಸಿದವರಿಗೆ ಉದ್ಯೋಗ ಕೊಡಲು ನಿಗದಿತ ಅವಧಿಯೊಳಗೆ ಸಾಧ್ಯವಾಗದಿದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ಸಹ ಕೊಡಲಾಗುತ್ತದೆ. ಅದೇ ಗ್ರಾಮದಲ್ಲಿ ಉದ್ಯೋಗ ನೀಡುವ ಈ ಯೋಜನೆಯು ಸಾಮಾಜಿಕ ಭದ್ರತೆಗೂ ಬುನಾದಿ ಹಾಕಿದೆ. ಇದಲ್ಲದೆ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸ್ವ-ಸಹಾಯ ಸಂಘಗಳನ್ನು ಸ್ಥಾಪಿಸಿ ಮಹಿಳೆಯರನ್ನು ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಸಲಾಗಿದೆ. ಕೇಂದ್ರ/ರಾಜ್ಯ ಸರ್ಕಾರಗಳು ಅಭಿವೃದ್ಧಿ ಪರ ಕಾರ್ಯಕ್ರಮಗಳ ಮೂಲಕ ಉದ್ಯೋಗ ಸೃಷ್ಟಿಗೆ ಹೈನುಗಾರಿಕೆ, ರೇಷ್ಮೆ ಕೃಷಿ, ಗೃಹ ಕೈಗಾರಿಕೆಗಳನ್ನು ಬಲಪಡಿಸಬೇಕಿದೆ. ಗ್ರಾಮೀಣ ಜೀವನಕ್ಕೆ ಪೂರಕವಾಗಿರುವ ಉದ್ಯೋಗ ನೀತಿಯೊಂದು ಸೃಷ್ಟಿಗೊಂಡಲ್ಲಿ ಮಾನವ ಹಕ್ಕುಗಳು ಸಾರ್ವತ್ರಿಕವಾಗಿ ಬೆಳೆಯಲು ಸಾಧ್ಯವಾಗುತ್ತದೆ.

### ಸರ್ವರಿಗೂ ಆರೋಗ್ಯ

ಮಾನವ ಹಕ್ಕುಗಳು ಮಾನವ ಸಂತತಿಯ ರಕ್ಷಣೆಯ ಭಾಗಗಳೇ ಆಗಿವೆ. ಮಾನವ ಸಂತತಿ ಉಳಿಕೆಯಂತೆ ಸದೃಢ ಮತ್ತು ಆರೋಗ್ಯ ಕಾಪಾಡುವುದು ಸಹ ಮಾನವ ಹಕ್ಕು ಆಗಿದೆ. ಆರೋಗ್ಯ ಸೇವೆಗಳು ಸರ್ವರಿಗೂ ಸುಲಭವಾಗಿ ಮತ್ತು ಕೈಗೆಟುಕುವ ಬೆಲೆಯೊಳಗೆ ಸಿಗುವಂತಾಗಬೇಕು. ಆರೋಗ್ಯವಂತ ಜನರು ಮಾತ್ರ ಮಾನವ ಹಕ್ಕುಗಳ ರಾಯಭಾರಿಯಾಗುತ್ತಾರೆ. ಅವರು ಉತ್ತಮ ಬದುಕಿಗೆ ಉದಾಹರಣೆಯಾಗಬಲ್ಲರು. ಆರೋಗ್ಯ ಕಾರ್ಯಕ್ರಮಗಳಲ್ಲಿ 'ಆರೋಗ್ಯ ಶಿಕ್ಷಣ' ಪ್ರಮುಖ ಪಾತ್ರವಿದೆ. ಇಂದು ಮಾನಸಿಕ ಒತ್ತಡದಲ್ಲಿ ಜನರಿದ್ದಾರೆ. ಈ ಮಾನಸಿಕ ಒತ್ತಡ ಕಡಿಮೆಗೊಳಿಸುವ ನಿಟ್ಟಿನಲ್ಲಿ ಸಾಗುವುದೆಲ್ಲವೂ ಮಾನವ ಹಕ್ಕುಗಳನ್ನು ಆಚರಣೆಗೆ ತರುವುದೇ ಆಗಿದೆ. ಮಾನಸಿಕ ಖಿನ್ನತೆಯನ್ನು ಹೋಗಲಾಡಿಸುವ ಕಾರ್ಯಕ್ರಮ ಹೆಚ್ಚಿಸುವುದು ಮಾನವ ಹಕ್ಕುಗಳ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆಂದು ಹೇಳಬಹುದಾಗಿದೆ.

### ವೃದ್ಧರ ಯೋಗಕ್ಷೇಮ ಮತ್ತು ಗೌರವದಿಂದ ಕಾಣುವುದು

ಭಾರತೀಯ ವೃದ್ಧರು ಅನೇಕ ಒತ್ತಡದಲ್ಲಿ ಸಿಲುಕಿಕೊಂಡಿದ್ದಾರೆ. ಅವರ ಬದುಕು ಸಾಕಷ್ಟು ಯಾತನೆಗಳಿಂದ ಕೂಡಿದೆ. ಅವರಿಗೆ ಆಹಾರ-ವಿಹಾರಕ್ಕೂ ಪರದಾಡುವ ಪರಿಸ್ಥಿತಿ

ನಿರ್ಮಾಣಗೊಂಡಿದೆ. ಅವರನ್ನು ಎಲ್ಲ ಹಂತಗಳಲ್ಲೂ ನಿರ್ಲಕ್ಷಿಸುವ ವಾತಾವರಣವಿದೆ. ಇಂಥ ಸ್ಥಿತಿ ಮಾನವ ಹಕ್ಕುಗಳ, ಸ್ಪಷ್ಟ ಉಲ್ಲಂಘನೆಯಾಗುವುದನ್ನು ಸೂಚಿಸುತ್ತದೆ. 'ಸಂಧ್ಯಾಸುರಕ್ಷಾ' ಅಂತಹ ಯೋಜನೆಗಳು ವೃದ್ಧರಿಗೆ ಒಂದಿಷ್ಟು ಸಾಂತ್ವನ ತಂದಿದ್ದರೂ ಅವರ ಬದುಕು ಇಂದು ಉಲ್ಲಸಿತವಾಗಿಲ್ಲ. ಯಾವ ಸಮಾಜದಲ್ಲಿ ವೃದ್ಧರ ಬದುಕು ಅತ್ಯಂತ ಮಧುರ ಮತ್ತು ಸುಸ್ಥಿತಿಯಲ್ಲಿ ಇರುತ್ತದೆಯೋ ಆ ಸಮಾಜವು ಮಾನವ ಹಕ್ಕುಗಳಿಗೆ ಕಟಿಬದ್ಧವಾಗಿದೆಂದು ಹೇಳಬಹುದಾಗಿದೆ. ಕನಿಷ್ಠ ಜೀವನ ನಿರ್ವಹಣೆಗೂ ಪರದಾಡುತ್ತಿರುವ ವೃದ್ಧರ ಬದುಕು ಸುನಿಶ್ಚಿತಗೊಳಿಸುವುದೇ ಮಾನವ ಹಕ್ಕಿನ ಉದ್ದೇಶವಾಗಿದೆ.

**ಮಕ್ಕಳ ಕ್ಷೇಮಾಭಿವೃದ್ಧಿ**

ಇಂದಿನ ಮಕ್ಕಳು ಮಾನವೀಯ ಸಂಬಂಧಗಳಿಂದ ಅತೀತರಾಗಿ ಬೆಳೆಯುತ್ತಿದ್ದಾರೆ. ಅವರ ಬದುಕಿನ ಗುರಿ ಕೇವಲ ಕೌಶಲ್ಯಗಳ ಜೋಡಣೆಗೆ ಮಾತ್ರ ಸೀಮಿತಗೊಳಿಸಲಾಗುತ್ತಿದೆ. ಯಾಂತ್ರಿಕತೆ ಮಕ್ಕಳ ಬದುಕಿನಲ್ಲಿ ಹಾಸು ಹೊಕ್ಕಾಗುತ್ತಿದೆ. ಮಕ್ಕಳಲ್ಲಿ ಮಾನವೀಯ ಗುಣಗಳನ್ನು ಮೂಡಿಸಲು ಪ್ರತಿ ಕುಟುಂಬದ ಸದಸ್ಯರು ತಮ್ಮ ನಡಾವಳಿಗಳನ್ನು ರೂಪಿಸಿಕೊಂಡಲ್ಲಿ 'ಮಾನವಹಕ್ಕು' ಮಕ್ಕಳ ಹಕ್ಕುಗಳು ಸಾರ್ಥಕಗೊಳ್ಳುತ್ತವಲ್ಲದೆ ಮಾನವೀಯ ಮೌಲ್ಯಗಳ ಬದುಕು ಸುನಿಶ್ಚಿತಗೊಳ್ಳಲು ಸಹ ಸಾಧ್ಯವಾಗುತ್ತದೆ.

**ಆಡಳಿತ ನಿರ್ವಹಣೆಯಲ್ಲಿ ಜನಪರ ಕಾಳಜಿ**

ಆಡಳಿತವು ಜನಪರವಾಗಿರುವುದೇ 'ಮಾನವಹಕ್ಕು' ನಿರ್ವಹಣೆಗೆ ಮೂಲಾಧಾರವಾಗಿದೆ. 'ಆಡಳಿತ' ಸರ್ವೋತ್ತಮಗೊಂಡಷ್ಟು ಮಾನವ ಹಕ್ಕುಗಳು ಸಾದರಗೊಳ್ಳುತ್ತವೆ. ದಬ್ಬಾಳಿಕೆ, ನೀತಿ, ದ್ವೇಷ ಸಾಧನೆ, ಬಲಪ್ರಯೋಗ, ಹತ್ತಿಕ್ಕುವಿಕೆ ಧರ್ಮ-ಧರ್ಮಗಳ ನಡುವೆ ತಿಕ್ಕಾಟಗಳೆಲ್ಲವನ್ನು ಆಡಳಿತವು ನಿಭಾಯಿಸುವ ಕಾರ್ಯ ಕೈಗೂಡುವಂತೆ ಮಾಡಿದರೆ ಮಾನವ ಹಕ್ಕುಗಳು ಸ್ಪಷ್ಟಗೊಳ್ಳುತ್ತವೆ. ಆಡಳಿತವು ಕ್ರಿಯಾಶೀಲ ವಂತಿಕೆಯಿಂದ ಜನರ ಆಶೋತ್ತರಗಳನ್ನು ಈಡೇರಿಸುವಂತಾದರೆ ಮಾನವ ಹಕ್ಕುಗಳು ಜಾರಿಗೆ ಬರುತ್ತವೆ.

ಮಾನವನು ತನ್ನ ಬದುಕು ಸರಾಗ-ಸರಳಗೊಳ್ಳಲು ಅನೇಕ ವ್ಯವಸ್ಥೆಗಳನ್ನು ರೂಢಿಗೆ ತಂದಿದ್ದಾನೆ. ಈ ವ್ಯವಸ್ಥೆಗಳು ಮಾನವ-ಮಾನವರಲ್ಲಿ ತಾರತಮ್ಯಕ್ಕೆ ದಾರಿ ಮಾಡಿವೆ. ಅಧಿಕಾರದ ವಲಯದಲ್ಲಿ ಇರುವ ಜನರ ಬದುಕು ಒಂದು ತೆರನಾದರೆ ಅಧಿಕಾರದ ಹೊರಗಿರುವವರ ಬದುಕು ಅಷ್ಟೊಂದು ಸುಗಮವಾಗಿರಲಾರದೆಂಬ ಸಂಗತಿಯು ಪ್ರಾದೇಶಿಕ ಅಸಮತೋಲನದಲ್ಲಿ ವ್ಯಕ್ತಗೊಂಡಿದೆ. ಆರ್ಥಿಕ ವಲಯದ ಹಿಡಿತವು ಸಹ ಒಂದು ತೆರನಾದ ಆರ್ಥಿಕ ಶೋಷಣೆಗೆ ಕಾರಣವಾಗಿದೆ. ಇದಲ್ಲದೆ ಧಾರ್ಮಿಕ-ಸಾಮಾಜಿಕ ಸಾಂಸ್ಕೃತಿಕ ವಲಯದ ಮುಂಚೂಣಿಯಲ್ಲಿ ಇರುವವರು ಮಾನವ ಹಕ್ಕುಗಳ ಪರಿಪಾಲನೆ ಮಾಡದಷ್ಟು ವೈಭವದಲ್ಲಿ ತೇಲುತ್ತಿದ್ದಾರೆ. ಕ್ರಿಕೆಟಿಗರು, ಸಿನೆಮಾ ತಾರೆಯರು, ರಾಜಕಾರಣಿಗಳು, ಅಧಿಕಾರಿಗಳೆಲ್ಲರ ಬದುಕನ್ನು, ಕೂಲಿ ಮಾಡುವವನ ಬದುಕನ್ನು ಅವಲೋಕಿಸುವಷ್ಟು ಮಾನವೀಯತೆ ನಮ್ಮಲ್ಲಿ ಬೆಳೆದು ಬರಬೇಕಾಗಿದೆ. ಒಂದು ಗ್ರಾಮವು ತಾಲ್ಲೂಕು, ಜಿಲ್ಲಾ ಕೇಂದ್ರಕ್ಕೆ ಸಮೀಪವಿದ್ದಲ್ಲಿ ಅಲ್ಲಿ ಮೂಲಭೂತ ಸೌಕರ್ಯಗಳು ಸಹನೀಯ ಮಟ್ಟದಲ್ಲಿರುತ್ತವೆ. ಇನ್ನು ಕುಗ್ರಾಮಗಳಲ್ಲಿಯ ಸೌಲಭ್ಯ ಕನಿಷ್ಠ ಮಟ್ಟದಲ್ಲೂ ಇರುವುದಿಲ್ಲ. ಗುಡ್ಡಗಾಡು, ಕೊಳೆಗೇರಿಗಳಲ್ಲಿ, ಕೇರಿಗಳಲ್ಲಿ ವಾಸವಾಗಿರುವ ಆದಿವಾಸಿಗಳು ದೀನ-ದಲಿತರು ಇನ್ನು ಅಜ್ಞಾನವಾಸದಲ್ಲಿದ್ದಾರೆ. ಅವರು ದಿನ ನಿತ್ಯದ ಹೊಟ್ಟೆ ಪಾಡಿಗೆ ಹರಸಾಹಸ ಮಾಡುತ್ತಿದ್ದಾರೆ. ಇಂಥ ದಯನೀಯ ಸ್ಥಿತಿಯಲ್ಲಿರುವವರಿಗೆ ಮಾನವ ಹಕ್ಕು ಕೊಡುವಲ್ಲಿ ಸಕಲರ ಪಾತ್ರ ಮಹತ್ವದ್ದಾಗಿದೆ. ಪ್ರಾಣಿಜನ್ಮಕ್ಕಿಂತಲೂ ಅಸಹನೀಯ ಬದುಕನ್ನು ನಿರ್ವಹಿಸುತ್ತಿರುವ ಇವರೊಂದಿಗೆ ಅನಕ್ಷರಸ್ಥರನ್ನು ಸುಶಿಕ್ಷಿತಗೊಳಿಸುವ ಕಾರ್ಯ ಮಹತ್ವದ್ದಾಗಿದೆ. ಇಂದು ವಿಜ್ಞಾನ-ತಂತ್ರಜ್ಞಾನ ಒದಗಿಸಿರುವ ಕೌಶಲ್ಯಗಳು ಎಲ್ಲ ಸ್ತರದ ಜನಾಂಗಕ್ಕೂ ವರ್ಗಾಯಿಸುವ, ಹೆಜ್ಜೆಯಲ್ಲಿಯೇ ಮಾನವ ಹಕ್ಕುಗಳ ಸಾರ್ಥಕತೆ ಇದೆ. 'ಮಾನವಹಕ್ಕು' ಮಾನವ ಬದುಕನ್ನು ಸಹ್ಯಗೊಳಿಸುವ ತಾರಕಶಕ್ತಿಯಾಗಿದೆ ಈ ಶಕ್ತಿಯು ಸರ್ವತ್ರ ಬೆಳಗಿಸಿದಾಗ ಕೊರತೆ, ಶೋಷಣೆ, ತಕರಾರು ತೊಂದರೆಗಳು ದೂರಾಗುತ್ತವಲ್ಲದೆ ಮನುಷ್ಯ ಮನುಷ್ಯನಾಗಿ ಬಾಳಿ, ಇತರರನ್ನು ಬದುಕಿಸುತ್ತಾನೆ. □





## ಶರಣ ಸಂಸ್ಕೃತಿ ಮತ್ತು ಮಕ್ಕಳು *

-ಗೊ.ರು. ಪರಮೇಶ್ವರಪ್ಪ

ಇಂದು ಊಹೆಗೂ ನಿಲುಕದಷ್ಟು ವೇಗದಲ್ಲಿ ಆಧುನಿಕ ಬದಲಾವಣೆಗಳಾಗುತ್ತಿವೆ. ಅದರಲ್ಲೂ ವಿಜ್ಞಾನದ ಅನ್ವೇಷಣೆಗಳ ಫಲವಾಗಿ ಇಡೀ ಮಾನವ ಸಮುದಾಯವೇ ತನ್ನ ಜೀವನದ ರೀತಿ ನೀತಿಗಳಲ್ಲಿ ಭಾರೀ ವ್ಯತ್ಯಾಸಗಳನ್ನು ಕಾಣುವಂತಾಗಿದೆ. ಬಹುಶಃ ಇಂದಿನ ಬಾಹ್ಯ ಪ್ರಭಾವದಿಂದ ಯಾರೂ ಹೊರತಾಗಿ ಉಳಿಯಲು ಸಾಧ್ಯವೇ ಇಲ್ಲ ಎನ್ನುವ ಪರಿಸ್ಥಿತಿ ಉಂಟಾಗಿದೆಯೆಂಬುದು ವಾಸ್ತವದ ಸಂಗತಿ.

ಈ ಬದಲಾವಣೆಯ ಬಿರುಗಾಳಿಯಲ್ಲಿ ಲೋಕದ ಪದ್ಧತಿ ಪರಂಪರೆಗಳೆಲ್ಲ ಮರದ ತರಗೆಲೆಗಳಂತೆ ಉದುರಿ ಹೋಗುತ್ತಿವೆ. ಇದನ್ನು ನಾವೆಲ್ಲ ಕಣ್ಣಾರೆ ಕಾಣುತ್ತಿದ್ದೇವೆ. ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಶರಣ ಸಂಸ್ಕೃತಿಯ ಸಂರಕ್ಷಣೆ ಎಷ್ಟರಮಟ್ಟಿಗೆ ಸಾಧ್ಯ ಎಂಬ ಪ್ರಶ್ನೆ ಉದ್ಭವಿಸಿದರೆ ಆಶ್ಚರ್ಯವಿಲ್ಲ. ಅದರಲ್ಲೂ ಶರಣ ಸಂಸ್ಕೃತಿಯ ಪರಿಚಯವಿಲ್ಲದ ದೂರದ ದೇಶಗಳಲ್ಲಂತೂ ಈ ಪ್ರಶ್ನೆ ಮತ್ತಷ್ಟು ಜಟಿಲವಾಗುತ್ತದೆ ಎನ್ನುವುದೂ ನಿಜ.

ಆದರೆ, ಶರಣ ಸಂಸ್ಕೃತಿಯ ಒಂದು ವಿಶೇಷವೆಂದರೆ ಅದು ಎಂತಹ ಸವಾಲನ್ನಾದರೂ ಎದುರಿಸಲು ಸಾಮರ್ಥ್ಯವನ್ನು ಹೊಂದಿರುವುದು. ಶರಣ ಸಂಸ್ಕೃತಿ ಬದಲಾಗುವ ಸಾಮಾನ್ಯ ನಾಗರಿಕತೆಯಂತಲ್ಲ. ದೇಶ-ಭಾಷೆಗಳನ್ನು ಮೀರಿದ ಮತ್ತು ಕಾಲಮಾನವನ್ನು ಮೀರಿದ ಒಂದು ವಿಶಿಷ್ಟ ಜೀವನ ಸಂಸ್ಕೃತಿ.

ಈ ಸಂಸ್ಕೃತಿಯಲ್ಲಿ ಮುಖ್ಯವಾಗುವುದು ವ್ಯಕ್ತಿಯ ವೇಷ ಭೂಷಣಗಳಲ್ಲ. ದೇಶ-ಭಾಷೆಗಳಲ್ಲ, ಸ್ಥಾನ-ಮಾನಗಳಲ್ಲ, ವರ್ಣ-ವರ್ಗಗಳಲ್ಲ, ವಿದ್ವತ್ತು-ಸಂಪತ್ತುಗಳೂ ಅಲ್ಲ. ಈ ಎಲ್ಲವನ್ನೂ ಅಲ್ಲಗಳೆಯುವ ವ್ಯಕ್ತಿಯ ಶುದ್ಧ ನುಡಿ, ಶುದ್ಧ ನಡೆ, ಈ ನಡೆ-ನುಡಿಗಳೊಂದಾಗಿ, ವೈಯಕ್ತಿಕ ಶೀಲಚಾರಿತ್ರ್ಯಗಳನ್ನು ಉಳಿಸಿಕೊಂಡು, ಸಕಲ ಜೀವರಾಶಿಗಳಿಗೂ ಲೇಸನ್ನು ಬಯಸುವುದೇ ಶರಣ ಸಂಸ್ಕೃತಿ.

ಆದ್ದರಿಂದಲೇ ಈ ಶರಣ ಸಂಸ್ಕೃತಿಯನ್ನು ಅರಳಿಸಿದ ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಬಸವಣ್ಣನವರ ನಾಯಕತ್ವದಲ್ಲಿ ನಡೆದ ಆಂದೋಲನ ಅದ್ವಿತೀಯ ಎನಿಸಿಕೊಂಡಿರುವುದು. ಮಾನವ ಘನತೆಗೆ ಕಳಂಕವೆನಿಸಿದ್ದ ಅಂಧಶ್ರದ್ಧೆ, ಅವೈಚಾರಿಕತೆ, ಅಸಮಾನತೆ, ಅಸ್ಪೃಶ್ಯತೆ ಮೊದಲಾದ ಅನಿಷ್ಟಗಳ ವಿರುದ್ಧ, ಧರ್ಮ ಮತ್ತು ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಅನಾಚಾರಗಳ ವಿರುದ್ಧ ಜನಜಾಗೃತಿ ಉಂಟುಮಾಡಿದ ಬಹು ದೊಡ್ಡ ಪ್ರಯೋಗ ಆ ಚಳುವಳಿ. ಹಿಂದೆಂದೂ ಅಂತಹದೊಂದು ಸಾರ್ವಕಾಲಿಕ ಮಹತ್ವದ ಆಂದೋಲನ ಜಗತ್ತಿನ ಯಾವ ಭಾಗದಲ್ಲೂ ನಡೆದಿರಲಿಲ್ಲ ಎಂಬುದನ್ನು ಬಹುತೇಕ ದೇಶ-ವಿದೇಶಗಳ ವಿದ್ವಾಂಸರು, ಸಂಶೋಧಕರು ಮತ್ತು ಸಮಾಜ ವಿಜ್ಞಾನಿಗಳು ಒಪ್ಪಿಕೊಂಡಿದ್ದಾರೆ.

ಈ ಹಿನ್ನಲೆಯಲ್ಲಿ ಶರಣ ಸಂಸ್ಕೃತಿಯನ್ನು ಇಂದಿನ ಮಕ್ಕಳ ಮನೋಭೂಮಿಕೆಯಲ್ಲಿ ಬಿತ್ತಬೇಕಾದ ಅಗತ್ಯವಿದೆ. ಏಕೆಂದರೆ ಶರಣ ಸಂಸ್ಕೃತಿ ಎಂದರೆ ಮಾನವ ಸಂಸ್ಕೃತಿ. ಅದು ಯಾವುದೇ ಒಂದು ನಿರ್ದಿಷ್ಟ ವರ್ಗಕ್ಕೆ ಸೀಮಿತವಾದುದಲ್ಲ.

ಮಕ್ಕಳ ಮನಸ್ಸು ಮೃದುವಾದುದು, ಹದವಾದುದು, ಅನುಕರಣೆ-ಅನುಸರಣೆ ಅವರ ಸಹಜ ನಡವಳಿಕೆಯಾಗಿದೆ. ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ ಎಂಬ ಮಾತು ಮಕ್ಕಳ ಭವಿಷ್ಯ ಕುರಿತು ಹೇಳಿದ ಮಾತು. ಪ್ರಾಥಮಿಕ ಶಿಕ್ಷಣ ಪಡೆದ ಮಗು ಪ್ರೌಢಶಿಕ್ಷಣ ಪಡೆಯಲು ಒಂದು ಹಂತಕ್ಕೆ ಬಂದು ನಿಲ್ಲುತ್ತದೆ. ಈ ಹಂತದಲ್ಲಿ ಹದಗೊಂಡ ಹೃದಯದಲ್ಲಿ ಬಿತ್ತುವ ಬೀಜಗಳು ಮುತ್ತಾಗಿ, ಬಾಳಿನ ಬದುಕಿನ ಹೊತ್ತಿಗೆ ಬೆಳೆಯಾಗಿ, ನಾಡಿಗೆ ಸಿರಿಯಾಗಿ ನಿಲ್ಲುತ್ತವೆ. ಆದರೆ ಇಂದಿನ ಶಿಕ್ಷಣದಲ್ಲಿ ವೈಚಾರಿಕತೆಯ ಗೊಂದಲಗಳು, ವೈಜ್ಞಾನಿಕ ಯುಗದ ವಿಧ್ವಂಸಕ ಕೃತ್ಯಗಳು, ನಾಗರೀಕತೆಯ ಹೆಸರಿನಲ್ಲಿ ಸ್ವೇಚ್ಛೆಯ ದ್ವಂದ್ವಗಳು ಮಕ್ಕಳನ್ನು ಹಾದಿ ತಪ್ಪಿಸುತ್ತಿವೆ. ನೈತಿಕತೆ ಕುಸಿದು ಹೋಗುತ್ತಿರುವುದು ಎದ್ದು ಕಾಣುತ್ತಿದೆ.

ಈ ಹಿನ್ನಲೆಯಲ್ಲಿ ಮಕ್ಕಳ ನೈತಿಕ ಹಾಗೂ ಆರೋಗ್ಯ

* ಅಧ್ಯಕ್ಷರು, ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

ಪೂರ್ಣ ವೈಚಾರಿಕತೆಯನ್ನು ಬೆಳೆಸುವ ದೃಷ್ಟಿಯಿಂದ ಶಿವಶರಣರ ವಚನಗಳನ್ನು ಹೇಳಿಕೊಡುವುದು, ಅವುಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳುವಂತೆ ಮಾಡುವುದು ಎಲ್ಲ ತಂದೆ-ತಾಯಿಗಳ ಕರ್ತವ್ಯ. ದಿನ ಬೆಳಗಾದರೆ ಹಿಂಸೆ, ಅಶ್ಲೀಲಗಳನ್ನು ಕಾಣುತ್ತಿರುವ ಮಾಧ್ಯಮಗಳಿಂದ ಮಕ್ಕಳನ್ನು ದೂರವಿರಿಸಿ ಉತ್ತಮ ಸಾಹಿತ್ಯ ಸಂಸ್ಕೃತಿಯ ಸಂಪರ್ಕ ಕೊಡಬೇಕಾಗಿದೆ.

ಕನ್ನಡದಲ್ಲಿ ಒಂದು ಜನಪದ ತ್ರಿಪದಿ ಇದೆ. ನಮ್ಮ ಗ್ರಾಮೀಣ ತಾಯಿಯೊಬ್ಬಳು ತೊಟ್ಟಿಲು ತೂಗುವಾಗ ಈ ತ್ರಿಪದಿ ಹಾಡಿದ್ದಾಳೆ

***ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು***
***ಮಾತಿನಲ್ಲಿ ಚೂಡಾಮಣಿಯಾಗು- ಕಂದಯ್ಯ***
***ಜ್ಯೋತಿಯೇ ಆಗು ಜಗಕ್ಕೆಲ್ಲ***

ತುಂಬ ಸುಂದರವಾದ ಸೊಲ್ಲು, ಶರಣ ಸಂಸ್ಕೃತಿ ಮತ್ತು ಮಕ್ಕಳನ್ನು ಕುರಿತು ಚಿಂತನೆ ನಡೆಸುವ ಈ ಸಂದರ್ಭಕ್ಕೆ ಈ ತ್ರಿಪದಿ ಅತ್ಯಂತ ಸೂಕ್ತವಾಗಿ ಅನ್ವಯ ವಾಗುತ್ತದೆ.

ಯಾರೇ ಆಗಲಿ ಹೆತ್ತ ತಂದೆ-ತಾಯಿಗಳಿಗೆ ತಮ್ಮ ಮಕ್ಕಳು ಸಭ್ಯರಾಗಬೇಕು, ಸಾತ್ವಿಕರಾಗಬೇಕು, ಲೋಕಕ್ಕೆ ಬೇಕಾಗಿ ಬಾಳಬೇಕು ಎಂಬ ಹಂಬಲವಿರುವುದು ಸಹಜ ವಾದುದು. ಅಂತೇ ನಮ್ಮ ಜನಪದ ತಾಯಿ ತನ್ನ ಮಗ ಆಚಾರಕ್ಕೆ ಅರಸನಾಗಬೇಕು, ನೀತಿಗೆ ಪ್ರಭುವಾಗಬೇಕು, ಮಾತಿನಲ್ಲಿ ಚೂಡಾಮಣಿಯಾಗಬೇಕು ಎಂದು ಹಾರೈಸುತ್ತಾಳೆ. ಹಾಗಾದರೆ ತನ್ನ ಮಗ ಜಗಕ್ಕೆಲ್ಲ ಜ್ಯೋತಿ ಯಾಗುತ್ತಾನೆ ಎಂದರೆ ವಿಶ್ವ ಮಾನವನಾಗುತ್ತಾನೆ ಎಂಬ ನಂಬಿಕೆ ಅವಳಿಗಿದೆ.

ವಾಸ್ತವವಾಗಿ ಹೇಳುವುದಾದರೆ, ಈ ಜನಪದ ತ್ರಿಪದಿ ನಮ್ಮ ಶರಣ ಸಂಸ್ಕೃತಿಯ ಸಾರವನ್ನೆಲ್ಲ ಹೀರಿಕೊಂಡು ಹೇಳಿದಂತಿದೆ. ಶರಣ ಸಂಸ್ಕೃತಿಯ ಆಶಯವಾದರೂ ಏನು? ನಮ್ಮ ನಡೆ-ನುಡಿ ಶುದ್ಧವಾಗಬೇಕು. ನಾವು ನೀತಿ ಬದ್ಧರಾಗಿ ನಡೆದುಕೊಳ್ಳಬೇಕು. ಮೇಲು-ಕೀಳೆಂದು ಪರಿಗಣಿಸದೆ ಪ್ರತಿಯೊಬ್ಬರೂ ಒಂದಲ್ಲ ಒಂದು ಕಾಯಕ ಮಾಡಿ ಗಳಿಸಬೇಕು, ಗಳಿಸಿದುದನ್ನು ಇತರರೊಡನೆ ಹಂಚಿ ಉಣ್ಣಬೇಕು, ಜೊತೆಗೆ ಆಧ್ಯಾತ್ಮಿಕ ಗುಣಗಳನ್ನು ಬೆಳೆಸಿಕೊಳ್ಳ ಬೇಕು. ಇದೇ ಶರಣರು ನಡೆದು ನುಡಿದಿರುವ ಸಂದೇಶ. ಈ ಸಂದೇಶ ಯಾವ ದೇಶದ ಮಕ್ಕಳಿಗೆ ಬೇಡ, ಯಾವ ಭಾಷೆಯ ಮಕ್ಕಳಿಗೆ ಬೇಡ, ಶರಣ ಸಂದೇಶ ಸರ್ವಮಾನವ ಜನಾಂಗಕ್ಕೆ, ಸರ್ವಕಾಲಕ್ಕೆ ಅನ್ವಯವಾಗುವ ಸಂದೇಶ.

ಜಾಗತೀಕರಣದ ಇಂದಿನ ಬಿರುಗಾಳಿಯಲ್ಲಿ ಜನಾಂಗ ವೆಲ್ಲ ತನ್ನ ಸಾತ್ವಿಕ ಗುಣಗಳನ್ನು ಕಳೆದುಕೊಳ್ಳುತ್ತಿದೆ. ಬಲವಿದ್ದ ವನು ಮಾತ್ರ ಬದುಕಬಲ್ಲ ಎಂಬ ಮಾತು ಇಂದಿನ ಸಿದ್ಧಾಂತ ವಾಗುತ್ತಿದೆ. ಇದು ತುಂಬ ಅಪಾಯಕಾರಿಯಾದ ಬೆಳವಣಿಗೆ, ಈ ಬಗೆಗೆ ನಾವು ಎಚ್ಚರವಹಿಸದಿದ್ದರೆ ನಮ್ಮ ಮಕ್ಕಳೆಲ್ಲ ನಮ್ಮ ಸಂಸ್ಕೃತಿಯನ್ನೇ ಸಂಪೂರ್ಣವಾಗಿ ಮರೆತು ಇಂದು ಎಲ್ಲೆಲ್ಲೂ ತಾಂಡವವಾಡುತ್ತಿರುವ ಅಸಹ್ಯ ಭೋಗ ಜೀವನ, ಜನಾಂಗೀಯ ದ್ವೇಷ, ಕೊಲೆ-ಸುಲಿಗೆ, ಭಯೋತ್ಪಾದನೆ, ಹಿಂಸಾತ್ಮಕ ಕೃತ್ಯ ಮೊದಲಾದ ಭೀಕರ ಅನಾಹುತಗಳಿಗೆ ಬಲಿಯಾಗುವುದರಲ್ಲಿ ಯಾವುದೇ ಸಂಶಯವಿಲ್ಲ.

ಆದ್ದರಿಂದ ನಮ್ಮ ಮಕ್ಕಳಿಗೆ ಶರಣ ಸಂಸ್ಕೃತಿಯ ಸಂಸ್ಕಾರ ನೀಡುವ ಅಗತ್ಯವಿದೆ. ಈ ಅಗತ್ಯ ವಿಶ್ವದ ಎಲ್ಲ ಮಕ್ಕಳಿಗೂ ಇದೆ. ನಮ್ಮ ಇಂದಿನ ಶಿಕ್ಷಣ ಪದ್ಧತಿಯಲ್ಲೂ ಮಕ್ಕಳಿಗೆ ನೈತಿಕ ಮೌಲ್ಯಗಳನ್ನು ತಿಳಿಸಿ ಅವರನ್ನು ತಿದ್ದುವ ಕೆಲಸವೂ ಆಗುತ್ತಿಲ್ಲ. ಮಕ್ಕಳು ಸಹಜವಾಗಿ ಶುದ್ಧವಾಗೇ ಇರುತ್ತವೆ. ಒಬ್ಬ ಶಿಕ್ಷಣ ತಜ್ಞ, "Every new born child is a genious, but the schools turn them into idiots" ಎಂದಿರುವ ಮಾತು ತುಂಬ ಗಂಭೀರ ವಾಗಿ ಚಿಂತಿಸಬೇಕಾದ ಮಾತು. ಜಗತ್ಪ್ರಸಿದ್ಧ ತತ್ವಜ್ಞಾನಿ ಸಾಕ್ರಟೀಸ್ ಒಂದು ಕಡೆ "Let not my schooling come in the way of my learning" ಎಂದು ಹೇಳಿದ್ದಾನೆ.

ಈ ಮಾತುಗಳನ್ನು ಗಮನಿಸಿದಾಗ, ಮಕ್ಕಳ ಶಿಕ್ಷಣವು ಶಾಲೆಯ ನಾಲ್ಕು ಗೋಡೆಗಳಿಗಿಂತ ಮನೆಯಲ್ಲಿ ಮತ್ತು ಹೊರಗಿನ ಪರಿಸರದಲ್ಲೇ ಹೆಚ್ಚಾಗಿ ನಡೆಯಬೇಕು ಎಂಬುದು ಸ್ಪಷ್ಟವಾಗುತ್ತದೆ. ಮಕ್ಕಳು ಸ್ವಾಭಾವಿಕವಾಗಿ ತಮ್ಮ ಸುತ್ತಮುತ್ತ ನಡೆಯುವುದನ್ನು ನೋಡಿ-ಕೇಳಿ ಅದನ್ನು ಸುಲಭವಾಗಿ





ಕಲಿತುಬಿಡುತ್ತವೆ. ಅದರಲ್ಲೂ ಮನೆಯಲ್ಲಿರುವಾಗ ತಮ್ಮ ತಂದೆ- ತಾಯಿಗಳು, ಮನೆಗೆ ಬಂದು ಹೋಗುವ ಅತಿಥಿಗಳ ನಡೆ-ನುಡಿಗಳನ್ನು ಅನುಕರಿಸಿಬಿಡುತ್ತವೆ. ಇದು ಸಾಮಾನ್ಯ.

ಆದ್ದರಿಂದ ಹಿರಿಯರಾದವರು ಮಕ್ಕಳಿಗೆ ಅನುಕರಿಸಿ ಯೋಗ್ಯವಾಗಿ ನಡೆದುಕೊಳ್ಳಬೇಕಾಗುತ್ತದೆ. ಮಕ್ಕಳಿಗೆ ಶರಣ ಜೀವನಕ್ಕೆ ಸಂಬಂಧಿಸಿದ ಪುಸ್ತಕಗಳು, ಚಿತ್ರಗಳು ಮತ್ತು ಗೀತೆಗಳನ್ನು ಓದಲು, ನೋಡಲು ಮತ್ತು ಕೇಳಲು ಅವಕಾಶ ಕಲ್ಪಿಸಬೇಕಾಗುತ್ತದೆ. ಮುಖ್ಯವಾಗಿ ಹಿರಿಯರಲ್ಲಿ ಶರಣ ಸಂಸ್ಕೃತಿ ಇದ್ದರೆ ಅದು ಸ್ವಾಭಾವಿಕವಾಗಿಯೇ ಮಕ್ಕಳಲ್ಲೂ ಮೈಗೂಡುತ್ತದೆ.

ಶುದ್ಧ ನಡೆ-ನುಡಿಗಳಿಂದ ತಮಗೆ ಸಮಾಜದಲ್ಲಿ ಮನ್ನಣೆ ದೊರಕುವುದೆಂದು ಮಕ್ಕಳಿಗೆ ಮನವರಿಕೆ ಆಗುವಂತೆ ಹಿರಿಯರು ನಡೆದುಕೊಳ್ಳಬೇಕು. ಶರಣ ಸಂಸ್ಕೃತಿ ವ್ಯಕ್ತಿಯಲ್ಲಿ ಶೀಲ-ಚಾರಿತ್ರ್ಯಗಳನ್ನು ಬೆಳೆಸುತ್ತದೆ, ನೀತಿ-ನೆಮ್ಮದಿಯನ್ನು ತಂದುಕೊಡುತ್ತದೆ. ಸೌಹಾರ್ದ-ಸಾಮರಸ್ಯ ಭಾವನೆಯನ್ನು ಬೆಳೆಸುತ್ತದೆ. ವಿವೇಕ-ವಿವೇಚನೆಗಳನ್ನು ಮೂಡಿಸುತ್ತದೆ. ಎಲ್ಲಕ್ಕೂ ಮಿಗಿಲಾಗಿ ವ್ಯಕ್ತಿ ನಿಜ ಮಾನವನಾಗುತ್ತಾನೆ.

ಈಗಿನ ಕಾಲದ ಮಕ್ಕಳೇನೂ ಸಾಮಾನ್ಯವಲ್ಲ, ರೇಡಿಯೋ, ಟಿ.ವಿ. ಪತ್ರಿಕೆ, ಇಂಟರ್‌ನೆಟ್, ಟೆಲಿಫೋನ್, ಸಿನಿಮಾ, ಇತ್ಯಾದಿ ಅತ್ಯಾಧುನಿಕ ಸಂವಹನ ಮಾಧ್ಯಮಗಳ ಫಲವಾಗಿ ಸಾಕಷ್ಟು ಬುದ್ಧಿವಂತರೇ ಆಗಿರುತ್ತಾರೆ. ಒಂದು ಸ್ವಾರಸ್ಯ: ಒಬ್ಬ ಶಾಲಾ ಹುಡುಗನನ್ನು ಯಾರೋ ಕರೆದು, 'ಏನು ಮಗು, ನೀನು ಓದಿ ದೊಡ್ಡವನದ ಮೇಲೆ ಏನು ಮಾಡಬೇಕೆಂದಿದ್ದೀಯ?' ಎಂದು ಕೇಳಿದನಂತೆ, ಆ ಖಿಲಾಡಿ 'ಮದುವೆಯಾಗಬೇಕೂಂತ ಇದ್ದೀನಿ' ಎಂದನಂತೆ. ಅಂತಹ ಅತಿಬುದ್ಧಿವಂತರು ಈಗಿನ ಮಕ್ಕಳು.

ಏನೇ ಇದ್ದರೂ ಮಕ್ಕಳ ಪ್ರತಿಭೆ ಮತ್ತು ಬುದ್ಧಿವಂತಿಕೆ ಹದಗೆಟ್ಟು ಹೋಗದಂತೆ ನೋಡಿಕೊಳ್ಳಲು ಸಾತ್ವಿಕವಾದ ಒಂದು ವಿಕಾಸದ ವಾತಾವರಣವನ್ನು ಒದಗಿಸಬೇಕು. ಅವರ ಬುದ್ಧಿವಂತಿಕೆ ಅಡ್ಡದಾರಿ ಹಿಡಿಯದಂತೆ ಅವರ ಪ್ರತಿಭೆ ಪ್ರಕ್ಷುಬ್ಧವಾಗದಂತೆ ನೋಡಿಕೊಳ್ಳಬೇಕು.

ಮಕ್ಕಳು ಶರಣ ಸಂಸ್ಕೃತಿಯನ್ನೇ ಏಕೆ ಪಾಲಿಸುವಂತೆ ಆಗಬೇಕೆಂದರೆ, ಆ ಸಂಸ್ಕೃತಿಯಲ್ಲಿರುವ ಮಾನವೀಯ ಗುಣಲಕ್ಷಣಗಳು, ಶರಣ ಸಂಸ್ಕೃತಿಯಲ್ಲಿ ಮೂರು ಬಹು ಮುಖ್ಯವಾದ ಅಂಶಗಳನ್ನು ಗಮನಿಸಬಹುದು. ಒಂದು ಅರಿವು ಇನ್ನೊಂದು ಆಚಾರ, ಮತ್ತೊಂದು ಅನುಭಾವ. ಈ 'ಅರಿವು' ಎನ್ನುವುದರಲ್ಲಿ ಮಕ್ಕಳ ವಿದ್ಯಾಭ್ಯಾಸ, ವೃತ್ತಿ ತರಬೇತಿ ಮತ್ತಿತರ ಜ್ಞಾನ ಸಂಗ್ರಹ ಸೇರಿದ್ದರೆ 'ಆಚಾರ'ದ ವ್ಯಾಪ್ತಿಯಲ್ಲಿ ನಮ್ಮ ನಡೆ-ನುಡಿಗಳು, ಪೂಜೆ-ಪುನಸ್ಕಾರಗಳು, ಕಾಯಕ-ದಾಸೋಹ ಇತ್ಯಾದಿಗಳು ಬರುತ್ತವೆ. ಇನ್ನು ಮೂರನೆಯದು 'ಅನುಭಾವ' ಮೊದಲಿನ ಎರಡು ಬಹು ಮಟ್ಟಿಗೆ ಬಹಿರಂಗಕ್ಕೆ ಸಂಬಂಧಿಸಿದರೆ ಈ ಮೂರನೆಯದು ಅಂತರಂಗದ ಅನುಷ್ಠಾನಕ್ಕೆ ಸಂಬಂಧಿಸಿದ್ದು, ಅನುಭಾವ ಎಂದರೆ ಮೌನ, ಧ್ಯಾನ ಮತ್ತು ಚಿಂತನ, ಸೃಷ್ಟಿಯ ಸಮಸ್ತ ದಲ್ಲೂ ಶಿವನನ್ನು ಕಾಣುವ ಆಂತರಿಕ ಚಿಂತನ.

ಈ ಮೂರು ಅಂಶಗಳು ಮಕ್ಕಳಿಗೆ ಮನೋಗತವಾಗಿ ಬಿಟ್ಟರೆ ಬಸವಣ್ಣನವರು ಹೇಳುವಂತೆ ಅಂತಹ ಮಕ್ಕಳು ನುಡಿದರೆ ಮುತ್ತಿನಹಾರವಾಗುತ್ತದೆ, ನುಡಿದರೆ ಮಾಣಿಕ್ಯದ ದೀಪ್ತಿಯಾಗುತ್ತದೆ, ನುಡಿದರೆ ಸ್ಫಟಿಕದ ಸಲಾಕೆಯಾಗುತ್ತದೆ, ನುಡಿದರೆ ಪರಮಾತ್ಮನೂ ಮೆಚ್ಚಿ ಅಹುದು ಅಹುದು ಎನ್ನುತ್ತಾನಂತೆ. ಬಸವಣ್ಣನವರು ಇನ್ನೊಂದು ಮಾತು ಹೇಳುತ್ತಾರೆ. ಅದೆಂದರೆ, **'ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವ ಒಲಿಯುವುದಿಲ್ಲ'** ಎನ್ನುತ್ತಾರೆ. ಶರಣ ಸಂಸ್ಕೃತಿ ಮೈಗೂಡಿತು ಎಂದರೆ ಅಂತಹ ವ್ಯಕ್ತಿಯ ನಡೆ-ನುಡಿಗಳು ಸಹಜವಾಗಿ ಒಂದಾಗಿರುತ್ತವೆಂದು ಬೇರೆ ಹೇಳಬೇಕಾಗಿಲ್ಲ.

ಶರಣರು ಕೇವಲ ಇನ್ನೊಬ್ಬರಿಗೆ ಹೇಳಹೋಗಲಿಲ್ಲ. ತಾವೇ ನಡೆದು ತೋರಿಸಿದರು. ಆದ್ದರಿಂದಲೇ ಅವರು ಆಡಿದ ಮಾತುಗಳು ತತ್ವಗಳಾಗಿವೆ, ಮೌಲ್ಯಗಳಾಗಿವೆ, ಶಾಶ್ವತ ಸತ್ಯವಾಗಿದೆ. ಆ ಮಾತುಗಳೇ ವಿಶ್ವಸಾಹಿತ್ಯದಲ್ಲೇ ವಿಶಿಷ್ಟವೆನಿಸಿರುವ ವಚನ ಸಾಹಿತ್ಯವಾಗಿದೆ.

ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತಹ ವಚನ ಗಳನ್ನು ಆಯ್ಕೆಮಾಡಿ ಅವರು ಆ ವಚನಗಳನ್ನು ಕಲಿಯು ವಂತೆ ಮಾಡಬೇಕು. ಅಂತಹ ವಚನಗಳ ಅರ್ಥವನ್ನು

ಅವರಿಗೆ ವಿವರಿಸಬೇಕು. ಮಕ್ಕಳು ಸಹಜವಾಗಿ ತಮ್ಮ ಕುತೂಹಲ ಮತ್ತು ಸಂಶಯ ನಿವಾರಣೆಗಾಗಿ ನೂರಾರು ಬಗೆಯಲ್ಲಿ ಪ್ರಶ್ನೆಗಳನ್ನು ಕೇಳಬಹುದು. ಅವುಗಳನ್ನು ಸಮಾಧಾನದಿಂದ ಆಲಿಸಿ ವೈಚಾರಿಕವಾಗಿ ಅವರಿಗೆ ಅರ್ಥವಾಗುವಂತೆ ವಿವರಿಸಿದರೆ ಖಂಡಿತವಾಗಿ ಅವರು ಸ್ವೀಕರಿಸುತ್ತಾರೆ.

ಶರಣ ಸಂಸ್ಕೃತಿಯ ಪಾಲನೆ ಮಕ್ಕಳಿಗೆ ಒಂದು ನಿರ್ಬಂಧವಾಗಬಾರದು. ಅದು ಸರ್ಕಾರದ ಕಾನೂನಿನಂತಲ್ಲ. ತಂದೆ- ತಾಯಿಗಳು ಕೇವಲ ಭಾವನಾತ್ಮಕವಾಗಿ ಅದನ್ನು ಮಕ್ಕಳ ಮೇಲೆ ಹೇರಬಾರದು, ಅದು ಅವರಿಗೆ ಒಂದು ಕಟ್ಟುಪಾಡಿನಂತಾಗಬಾರದು. ಶರಣ ಸಂಸ್ಕೃತಿಯ ಭಾವ ಮಕ್ಕಳ ಅಂತರಂಗದಿಂದಲೇ ಅರಳಲು ಅಗತ್ಯವಾದ ವಾತಾವರಣ ಮೂಡಿಸಿದರೆ ಸಾಕು.

ಶರಣ ಸಂಸ್ಕೃತಿಯಲ್ಲಿ ಇಂದಿನ ಮಕ್ಕಳು ಒಪ್ಪುವ ಶ್ರದ್ಧೆಯ ಅಧ್ಯಯನ, ಸಮಾಜಸೇವೆ, ಶುದ್ಧಕಾಯಕ ಮೊದಲಾದ ವೈಚಾರಿಕ ಒರೆಗಲ್ಲನ್ನೂ ನಿಲ್ಲುವಂತಹ ಶ್ರೇಷ್ಠ ಅಂಶಗಳೇ ಇವೆ. ನಾವು ಮಾಡಬೇಕಾಗುವುದೇನೆಂದರೆ ಅವುಗಳನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಡುವುದು.

ಮಕ್ಕಳಿಗೆ ಬೇಕಾಗಿರುವುದು ಅನುಕರಣೀಯ ಶಿಕ್ಷಣವಲ್ಲ, ಅನುಭವದ ಶಿಕ್ಷಣ. ಜಾಣ್ಮೆಯ ಶಿಕ್ಷಣವಲ್ಲ, ಜೀವನ ಶಿಕ್ಷಣ. ವಿದ್ವತ್ತಿನ ಶಿಕ್ಷಣಕ್ಕಿಂತಲೂ ವಿವೇಕದ ಶಿಕ್ಷಣ, ಕೇವಲ ಕಂಠಪಾಠದ ಶಿಕ್ಷಣವಲ್ಲ, ಕಾಯಕಶೀಲ ಶಿಕ್ಷಣ, ಮಕ್ಕಳಿಗೆ ಬೋಧಿಸುವಾಗ ನಮ್ಮ ಬೋಧನೆಗೆ ಬದುಕಿನ ಸ್ಪರ್ಶವಿರಬೇಕು. ಮಕ್ಕಳಲ್ಲಿ ದೈವಶ್ರದ್ಧೆ, ಕರ್ತವ್ಯನಿಷ್ಠೆ, ಸಮಯಪ್ರಜ್ಞೆ, ಸಾಮಾಜಿಕ ಹೊಣೆಗಾರಿಕೆ, ಕಾಯಕಗೌರವ, ದಾಸೋಹ ಭಾವ ಮತ್ತು ಆತ್ಮವಿಶ್ವಾಸಗಳನ್ನು ಬೆಳೆಸುವಂತಹ ವಸ್ತುನಿಷ್ಠ ಶಿಕ್ಷಣ ದೊರಕುವಂತಾಗಬೇಕು.

ಮಕ್ಕಳಲ್ಲಿ ಜೀವನ ಸಂಸ್ಕೃತಿ ರೂಪಿಸುವ ಶಿಲ್ಪಿಗಳೆಂದರೆ ಮಕ್ಕಳ ಪಾಲಕರು ಮತ್ತು ಶಿಕ್ಷಕರು. ಅವರು ಮೊದಲು ಶ್ರೇಷ್ಠ ಗುಣಗಳ ಗಣಿಗಳಾಗಬೇಕು. ಹಾಗಿದ್ದರೆ ಮಕ್ಕಳಿಗೆ ಸಹಜವಾಗಿ ಅವರಲ್ಲಿ ಅವರ ಮಾತುಗಳಲ್ಲಿ ವಿಶ್ವಾಸ ಮೂಡುತ್ತದೆ.

ಅದು ಹೊರತಾಗಿ ಹಿರಿಯರಾದವರು ಉದಾಸೀನ ಮಾಡಿದರೆ ಲಕ್ಷಾಂತರ ಮಕ್ಕಳ ಭವಿಷ್ಯ ಹಾಳಾಗಿ ಬಿಡುತ್ತದೆ. ಶರಣ ಸಂಸ್ಕೃತಿಯ ಶಿಕ್ಷಣವಿಲ್ಲದೆ ಸನ್ನಿವೇಶದ ಒತ್ತಡಕ್ಕೆ ಬಲಿಯಾಗಿ ಅನೇಕ ಮಕ್ಕಳು ಅನೈತಿಕ ಬದುಕಿಗೆ ಇಳಿದಿರುವ ನೂರಾರು ನಿದರ್ಶನಗಳಿವೆ.

ಅಂತಹ ಅಸಹಾಯಕ ಮಕ್ಕಳ ಬಗೆಗೆ ರಿಚರ್ಡ್ ಮಾರ್ಕ್ ಎಂಬ ಗಾಯಕ ತಾನೇ ರಚಿಸಿರುವ ಹಾಡಿನ ನಾಲ್ಕು ಸಾಲುಗಳು ಹೀಗಿವೆ

I have tasted my own hunger
sold my body to survive
Lord, I know I am boud for heaven
Because, I have done my time in Hell

ಮಕ್ಕಳ ಬಗೆಗೆ ಎಚ್ಚರ ವಹಿಸದಿದ್ದರೆ ಅವರ ಬದುಕು ನರಕವಾಗಿ ಬಿಡುತ್ತದೆ. ಈ ಕುರಿತು ಎಲ್ಲ ತಂದೆ ತಾಯಂದಿರು ಹಿರಿಯರೆಲ್ಲರು ಗಂಭೀರ ಚಿಂತನೆ ನಡೆಸಬೇಕು. ❑

**ರಾಜ್ಯಮಟ್ಟದ ಪ್ರಬಂಧ, ಕವನ, ಹನಿಗವನ ಸ್ಪರ್ಧೆಗೆ ಆಹ್ವಾನ**

**ಬೆಂಗಳೂರು, ಬಸವ ಸಮಿತಿಯು ಬಸವ ಜಯಂತಿ** ನಿಮಿತ್ತವಾಗಿ 'ವಚನಗಳಲ್ಲಿ ವ್ಯಕ್ತಿತ್ವ ವಿಕಸನ ನೆಲೆ-ಬೆಲೆ' ವಿಷಯದ ಬಗ್ಗೆ ಪ್ರಬಂಧ, 'ಶರಣರು ನಿರೂಪಿಸಿದ ವಚನ ಧರ್ಮ'ವನ್ನು ಕುರಿತು ಕವನ, ಹಾಗೂ 'ವಚನಾಧಾರಿತ ಜೀವನ ಧರ್ಮ' ಕುರಿತು ಹನಿಗವನ ಸ್ಪರ್ಧೆಗಳನ್ನು ಏರ್ಪಡಿಸಿದೆ. ಸ್ಪರ್ಧೆಯಲ್ಲಿ ಹಿರಿಯರು-ಕಿರಿಯರು ಎಂಬ ವಿಭಾಗವಿದ್ದು ವಿಜೇತರಾದವರಿಗೆ ಕ್ರಮವಾಗಿ ಮೂರು ಬಹುಮಾನಗಳನ್ನು ನೀಡಲಾಗುವುದು. ಪ್ರಬಂಧವು ೧೦ ಪುಟಕ್ಕೆ ಮೀರದಂತೆ, ಕವನ ೩೦ ಸಾಲುಗಳಿಗೆ ಮೀರದಂತೆ ಹಾಗೂ ಹನಿಗವನ ೧೦ ಸಾಲುಗಳಿಗೆ ಮೀರದಂತೆ ಕಾಗದದ ಒಂದೇ ಮಗ್ಗುಲಲ್ಲಿ ಬರೆದು ಡಿ.ಟಿ.ಪಿ. ಮಾಡಿಸಿ ಸ್ವವಿಳಾಸ, ಕಿರುಪರಿಚಯ, ಭಾವಚಿತ್ರದೊಂದಿಗೆ ಏಪ್ರಿಲ್ ೧೧ರ ಒಳಗೆ, **ಶ್ರೀ ಅರವಿಂದ ಜತ್ತಿ, ಅಧ್ಯಕ್ಷರು, ಬಸವಸಮಿತಿ, ಬಸವ ಭವನ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು-೧** ಈ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಸಮಿತಿಯವರು ತಿಳಿಸಿರುತ್ತಾರೆ. ಹೆಚ್ಚಿನ ಮಾಹಿತಿಗಾಗಿ ಈ ಮೊಬೈಲ್ ಸಂಖ್ಯೆಯನ್ನು **9845262373** ಸಂಪರ್ಕಿಸುವುದು.





## ಹಾಗಾದರೆ ಮುಂದೇನು ?

-ರೇಣುಕಾರಾಧ್ಯ ಎಸ್. *

**ದೇಶಕ್ಕೆ** ಸ್ವಾತಂತ್ರ್ಯ ಬಂದು ೬೫ ವರ್ಷಗಳು ಸಂದು ಹೋದವು. ಒಂದು ರಾಷ್ಟ್ರ ಜೀವನದಲ್ಲಿ ಅದು ವ್ಯಕ್ತಿಯ ಬಾಲ್ಯವಿದ್ದಂತೆ. ಬಾಲ್ಯದಲ್ಲಿ ವ್ಯಕ್ತಿಗೆ ಉತ್ತಮ ಶಿಕ್ಷಣ, ಮಾರ್ಗದರ್ಶನದ ಅಗತ್ಯವಿರುವಂತೆ ಒಂದು ರಾಷ್ಟ್ರಕ್ಕೆ ಅದರ ಚಾರಿತ್ರ್ಯ ನಿರ್ಮಾಣ ದೃಷ್ಟಿಯಿಂದ ರಾಷ್ಟ್ರೀಯ ನೀತಿ ನಿರೂಪಣೆ ಮುಖ್ಯವಾಗುತ್ತದೆ. ಆದರೆ ದುರ್ದೈವದಿಂದ ನಮ್ಮ ರಾಷ್ಟ್ರದ ಎರಡು ಮುಖ್ಯಕ್ಷೇತ್ರಗಳಲ್ಲಿ 'ಇದಮಿತ್ಥಂ' ಎಂಬ ನೀತಿಯಿಲ್ಲದೆ ಗೊಂದಲದಲ್ಲಿ ಸಿಲುಕಿದೆ. ರಾಷ್ಟ್ರದ ಮಾನವ ಸಂಪತ್ತನ್ನು ರೂಢಿಸಬಲ್ಲ ಶಿಕ್ಷಣ ಕ್ಷೇತ್ರ ಮತ್ತು ಜನತೆಗೆ ಮೂಲಭೂತವಾದ ಅನ್ನ, ಅರಿವೆಯನ್ನು ಒದಗಿಸಿ ಕೊಡಬೇಕಾದ ಕೃಷಿಕ್ಷೇತ್ರಗಳೇ ಆ ಎರಡು ಪ್ರಮುಖ ಕ್ಷೇತ್ರಗಳು.

ಮೊದಲನೆಯದಾಗಿ ಶಿಕ್ಷಣಕ್ಷೇತ್ರ. ಜಗತ್ತಿನ ಎಲ್ಲಾ ಶಿಕ್ಷಣ ತಜ್ಞರ, ಮನೋವಿಜ್ಞಾನಿಗಳ ಏಕಾಭಿಪ್ರಾಯವೆಂದರೆ ಪ್ರಾಥಮಿಕ ಶಿಕ್ಷಣವು ಆಯಾ ಮಕ್ಕಳ ಮಾತೃಭಾಷೆಯಲ್ಲಿಯೇ ದೊರೆಯಬೇಕೆನ್ನುವುದು. ಈ ವಿಚಾರಗಳಲ್ಲಿ ಸ್ಪಷ್ಟತೆ ಮತ್ತು ದೃಢತೆ ಎರಡೂ ಇಲ್ಲದೆ ಗೊಂದಲದ ಗೂಡಾಗಿದೆ ಶಿಕ್ಷಣ ಕ್ಷೇತ್ರ

ಎಲ್ಲರಿಗೂ ಅನುಭವಕ್ಕೆ ಬಂದಿರುವ ಒಂದು ವಿಚಾರವೆಂದರೆ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯಲ್ಲಿ ಅತಿ ಹೆಚ್ಚಿನ ಉತ್ಸಾಹದಿಂದ, ಕಳಕಳಿಯಿಂದ ತಮ್ಮ ಅಂತರಂಗದ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು, ಸುಲಭ ಸಾಧನವಾಗುತ್ತದೆ. ಗಾಂಧೀಜಿಯವರು ಒಮ್ಮೆ ಈ ಬಗ್ಗೆ ಮಾತಾಡುತ್ತ, ಮಾತೃಭಾಷೆಯಲ್ಲಿ ಶಿಕ್ಷಣ ದೊರೆಯದ ವಿದ್ಯಾರ್ಥಿಯ ಅಮೂಲ್ಯವಾದ ಆರು ವರ್ಷಗಳ ಸಮಯ ವ್ಯರ್ಥವಾಗುತ್ತದೆಂದು ಅಭಿಪ್ರಾಯ ಪಟ್ಟಿದ್ದಾರೆ. ಒಂದು ದೇಶದ, ಪ್ರದೇಶದ ಜನರ ಭಾವನೆಗಳು, ಬದುಕು ಮತ್ತು ಸಂಸ್ಕೃತಿ, ಜೀವನ ಶ್ರೀಮಂತಿಕೆ ಮೊದಲಾದ ಮೌಲ್ಯಗಳು ವ್ಯಕ್ತಿಗಳಲ್ಲಿ ಉಳಿಸಿ ಬೆಳೆಸಬೇಕೆಂದಿದ್ದರೆ ಅದು ಮಾತೃಭಾಷೆಯಲ್ಲಿ ಶಿಕ್ಷಣಪಡೆಯುವುದರಿಂದ ಮಾತ್ರ ಸಾಧ್ಯ.

ಇನ್ನು ಶಿಕ್ಷಣದಲ್ಲಿ ಇಂಗ್ಲೀಷ್‌ನ ಸ್ಥಾನ ಯಾವುದು ಮತ್ತು ಎಷ್ಟರ ಮಟ್ಟಿಗಿರಬೇಕು. ಅದೊಂದು ಸಂಪರ್ಕ ಭಾಷೆಯಾದರೆ ಸಾಕು. ಜ್ಞಾನ-ವಿಜ್ಞಾನಗಳನ್ನು ಮಾತೃಭಾಷೆಯ ಮೂಲಕವಾಗಿಯೇ ಕಲಿಸಬೇಕು. ಇದರಿಂದ ಅಲ್ಪಸಮಯದಲ್ಲಿಯೇ ಕಲಿಕೆ ಸಿದ್ಧಿಸುವುದಲ್ಲದೆ ಮನದಲ್ಲಿ ಸ್ಥಾಯಿಯಾಗಿ ನಿಲ್ಲುತ್ತದೆ.

ಇನ್ನು ನಮ್ಮ ಇಂದಿನ ಬಹುತೇಕ ಶಿಕ್ಷಣ ಸಂಸ್ಥೆಗಳು ವಂಚನೆಯ ಗೂಡುಗಳಾಗಿದ್ದು, ನೈತಿಕ ಮೌಲ್ಯಗಳು ತಳಕಚ್ಚಿರುವುದನ್ನು ಎಲ್ಲರೂ ಗಮನಿಸಬಹುದು. ವಿದ್ಯಾರ್ಥಿನಿಯರಿಗೆ ಲೈಂಗಿಕ ಕಿರುಕುಳ ದಿನನಿತ್ಯದ ಸುದ್ದಿಯಾಗಿದೆ. ಸಂಬಳ-ಸಾರಿಗೆ-ಭತ್ಯೆಗಳನ್ನು ಏರಿಸಿಕೊಳ್ಳಲು ಹೋರಾಡುವ ಶಿಕ್ಷಕರ ಸಂಘಸಂಸ್ಥೆಗಳು,. ಈ ಅನೈತಿಕ ಚಟುವಟಿಕೆಗಳ ವಿರುದ್ಧ ಏಕೆ ಚಕಾರವೆತ್ತುತ್ತಿಲ್ಲ? ಒಮ್ಮೆ ಜನಮಾನಸದಿಂದ ಶಿಕ್ಷಕರ ಬಗ್ಗೆಯಿರುವ ಗೌರವ ಭಾವನೆಗಳು ಮಾಯವಾದರೆ ಮತ್ತೆಂದೂ ಶಿಕ್ಷಕರ ಬಗ್ಗೆ ಸದಭಿಪ್ರಾಯ ಮೂಡಿಬರುವುದಿಲ್ಲ. ವಿಶ್ವವಿದ್ಯಾಲಯಗಳಲ್ಲಿನ ಲೈಂಗಿಕ ಹಗರಣಗಳನ್ನು ಗಮನಿಸಿದರಂತು ನಾಚಿಕೆಯಿಂದ ತಲೆತಗ್ಗಿಸಬೇಕಾಗುತ್ತದೆ. ಈ ಬಗ್ಗೆ ಸಂಬಂಧಿಸಿದರೆಲ್ಲರೂ ಆತ್ಮಾವಲೋಕನ ಮಾಡಿಕೊಂಡು ಪರಿಹಾರವನ್ನು ಕಂಡುಕೊಳ್ಳದೆ ಹೋದರೆ ಮುಂದಿನ ಅನಾಹುತಗಳನ್ನು ಊಹಿಸಲೂ ಅಸಾಧ್ಯವಾಗುತ್ತದೆ.

ಇನ್ನು ಅವಗಣನೆಗೆ ತುತ್ತಾಗಿರುವ ಎರಡನೇ ಕ್ಷೇತ್ರವೇ ಕೃಷಿ ಕ್ಷೇತ್ರ, ನಮ್ಮ ಪೂರ್ವಿಕರು 'ಕೃಷಿತೋ ನಾಸ್ತಿ ದುರ್ಭಿಕ್ಷಂ' ಎಂದರು. ಮಹಾಭಾರತದಲ್ಲಿ 'ಕೃಷಿಯೇ ಸರ್ವಸಂಪದದ ಮೂಲ'ವೆಂದು ಬಣ್ಣಿಸಿದರಲ್ಲದೆ ಕೃಷಿ-ಕಾಯಕವೇ ದೇಶದಲ್ಲಿ ಶಾಂತಿನೆಲೆಸಲು ಬಹುಮುಖ್ಯ ವ್ಯವಸ್ಥೆಯೆಂದು

* 8ನೇ ಅಡ್ಡರಸ್ತೆ, 1ನೇ ಮೈನ್, ಶ್ರೀನಗರ, ದೇವರಾಯಪಟ್ಟಣ ಅಂಚೆ, ತುಮಕೂರು-572 104.

ನಂಬಿ ಕೃಷಿಗೆ ಪ್ರೋತ್ಸಾಹ ಕೊಡುತ್ತಾ ಬಂದರು. ಹರಪ್ಪ –ಮಹೇಂಜಾದಾರೋ ನಾಗರಿಕತೆಯಿಂದಲೂ ನೀರಾವರಿಗೆ ಆದ್ಯತೆಯನ್ನು ಕೊಟ್ಟಿರುವುದನ್ನು ನಾವು ಇತಿಹಾಸದಲ್ಲಿ ಗಮನಿಸಿದ್ದೇವೆ.

ನಮ್ಮ ದೇಶದಲ್ಲಿ ಸ್ವಾತಂತ್ರ್ಯಾನಂತರ ಕೃಷಿರಂಗದಲ್ಲಿ ಹಲವು ವ್ಯತ್ಯಯಗಳುಂಟಾದವು. ಪ್ರಾರಂಭದ ಪಂಚ ವಾರ್ಷಿಕ ಯೋಜನೆಗಳಲ್ಲಿ ಹಲವು ಬೃಹತ್ ಅಣೆಕಟ್ಟು ಗಳನ್ನು ಕಟ್ಟಲಾಯಿತಾದರೂ ಮುಂದೆ ಬಂದ ಸರ್ಕಾರಗಳು ರೈತರ ಉತ್ಪತ್ತಿಗೆ ಸೂಕ್ತ ಮಾರುಕಟ್ಟೆ ಒದಗಿಸುವುದರಲ್ಲಿ ವಿಫಲವಾದವು.

೧೯೯೦ರ ನಂತರ ಜಾಗತೀಕರಣ, ಖಾಸಗೀಕರಣ ಉದಾರೀಕರಣಗಳ ನೆಪವೊಡ್ಡಿ ಮುಗ್ಧ ಕೃಷಿಕನನ್ನು ಹಗಲು ದರೋಡೆ ಮಾಡಲು ಖಾಸಗಿ ಕಂಪನಿಗಳು ನಾ ಮುಂದು ತಾ ಮುಂದೆ ಎಂದು ಮುಂದೆ ಬಂದವು. ಕುಲಾಂತರಿ ಬೀಜಗಳನ್ನು, ರಸಗೊಬ್ಬರಗಳನ್ನು ರಾಸಾಯನಿಕ ಕ್ರಿಮಿ ನಾಶಕಗಳನ್ನು ಬಳಸುವಂತೆ ರೈತರನ್ನು ಪುಸಲಾಯಿಸ ಲಾಯಿತು. ಅನಿವಾರ್ಯ ಒತ್ತಡಗಳಿಗೆ ಒಳಗಾದ ರೈತ ಅತಿದುಬಾರಿ ಬೆಲೆ ತೆತ್ತು ಬೀಜಗೊಬ್ಬರ, ಕ್ರಿಮಿನಾಶಕಗಳನ್ನು ಕೊಂಡು ಸಾಲಗಾರನಾದ. ಉಳುಮೆಗೆ ಜಾನುವಾರು ಗಳನ್ನು ಅವಲಂಬಿಸಿದ್ದ ರೈತನಿಗೆ ಟ್ರಾಕ್ಟರ್ ವ್ಯಾಮೋಹ ಅಮರಿಕೊಂಡಿತು. ಪ್ರಾರಂಭದಲ್ಲಿ ವಾಣಿಜ್ಯ ಉತ್ಪಾದಕ ಕಂಪನಿಗಳು ಹಣಕಾಸು ಸಂಸ್ಥೆಗಳು ತಮ್ಮ ವಹಿವಾಟು ಗಳನ್ನು ವಿಸ್ತರಿಸಿಕೊಳ್ಳಲು ಬಹಳ ಸುಲಭವಾಗಿ ಸಿಗುವ ಗ್ರಾಹಕ 'ಅಮಾಯಕ ರೈತರನ್ನು' ಹರಕೆಯ ಕುರಿಗಳನ್ನಾಗಿ ಮಾಡಿಕೊಂಡರು. ಕೈಗಾರಿಕೆಗಳಿಗೆ ೩% ಅಥವಾ ೪% ಬಡ್ಡಿ ಸಾಲ ಕೊಡುವ ಬ್ಯಾಂಕುಗಳು ರೈತನಿಗೆ ೧೩% ಅಥವಾ ೧೪% ಬಡ್ಡಿಯ ಆಧಾರದ ಮೇಲೆ ಸಾಲ ನೀಡಿ 'ಶಾಲದ ಕುಣಿಕೆ'ಯಲ್ಲಿ ರೈತರನ್ನು ಸುತ್ತಿದರು. ಮೊದಲೇ ಅವಿದ್ಯಾವಂತನಾದ ರೈತ ಈ 'ಬುದ್ಧಿವಂತರ' ಮೋಸದಾಟಕ್ಕೆ ಬಲಿಯಾದ. ಮುಂದಿನ ಕಥೆ ಎಲ್ಲರಿಗೂ ತಿಳಿದದ್ದೆ. ೧೮೫೭ರ ಸ್ವಾತಂತ್ರ್ಯ ಹೋರಾಟವನ್ನು ಹೊರತು ಪಡಿಸಿದರೆ ಮುಂದಿನ ೯೦ ವರ್ಷಗಳ ಸ್ವಾತಂತ್ರ್ಯ ಹೋರಾಟದಲ್ಲಿ ಜಲಿಯಾನ್‌ವಾಲಾಬಾಗ್ ದುರಂತವು ಸೇರಿದಂತೆ ಹುತಾತ್ಮರಾದವರ ಸಂಖ್ಯೆ ಹತ್ತು ಸಾವಿರವನ್ನು ಮೀರಿರಲಾರದು. ಆದರೆ ೧೯೯೫ರಿಂದೀಚೆಗೆ ಸರ್ಕಾರಿ ಅಂಕಿ ಸಂಖ್ಯೆಗಳ ಆಧಾರದ ಮೇಲೆಯೇ ಹೇಳುವು ದಾದರೆ– ತನ್ನದೇ ಸರ್ಕಾರದ, ತನ್ನ ದೇಶದ ಅಧಿಕಾರಿ ವರ್ಗದ ನಿರ್ಲ್ಯಕ್ಷದಿಂದ ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ಎರಡು ಲಕ್ಷ ನಲವತ್ತು ಸಾವಿರ! ಇದನ್ನು ಗಂಭೀರವಾಗಿ ಯಾರೂ ಪರಿಗಣಿಸಿದಂತಿಲ್ಲ. ಇಷ್ಟೊಂದು ಸಂಖ್ಯೆಯಲ್ಲಿ ರೈತರ ಆತ್ಮಹತ್ಯೆಗೆ ಕಾರಣಗಳೇನು, ಕಾರಣರಾದವರು ಯಾರು? ಇದಕ್ಕೆಲ್ಲಾ ಯಾರಾದರೂ ಹೊಣೆಗಾರರಲ್ಲ ಬೇಕಲ್ಲವೇ?

ಪ್ರಖ್ಯಾತ ಅಂಕಣಕಾರ ಪಿ. ಸಾಯಿನಾಥ್ ಹೇಳುವಂತೆ 'A good drought is welcomed by every one' ಎನ್ನುವುದು ಈ ದೇಶದ ಮಟ್ಟಿಗೆ ಅಕ್ಷರಷಃ ನಿಜ ವಾಗಿದ್ದು 'ಬೆಂದ ಮನೆಯಲ್ಲಗಳ ಹಿರಿದಂತೆ' ಎನ್ನುವ ಗಾದೆ ಮಾತು ಬಹುತೇಕ 'ವ್ಯವಸ್ಥೆ'ಯಲ್ಲಿರುವ ಸಣ್ಣವರು ಮತ್ತು ದೊಡ್ಡವರು ಎನ್ನುವ ಬೇಧವಿಲ್ಲದೆ ಎಲ್ಲರಿಗೂ ಅನ್ವಯಿಸುತ್ತದೆ. ಇದಕ್ಕೆಲ್ಲಾ ಕಾರಣ ದೇಶ, ಪ್ರೇಮ, ದೇಶ ಭಕ್ತಿಯ ಅಭಾವವೆಂದರೆ ಅತಿಶಯೋಕ್ತಿಯಾಗಲಾರದು. ನೈತಿಕತೆಯ ತೀವ್ರ ಕುಸಿತ ಕಂಡಿರುವ ನಮ್ಮ ದೇಶದ ಭವಿಷ್ಯಕ್ಕೆ ಮಂಕುಕವಿದಂತಾಗಿದೆ.

ಹಾಗಾದರೆ ಮುಂದೇನು ?

ಆಗಿದ್ದು ಆಗಿ ಹೋಗಿದೆ. ಒಬ್ಬನೆ ರೈತನೂ ಆತ್ಯಹತ್ಯೆ ಮಾಡಿಕೊಳ್ಳದ ಸ್ಥಿತಿಯನ್ನು ನಿರ್ಮಾಣ ಮಾಡುವುದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಕಲಿತವರ, ಬಂಡವಾಳ ಗಾರರ, ಅಧಿಕಾರಶಾಹಿಯ ಆದ್ಯ ಕರ್ತವ್ಯವಾಗಿದೆ. ಈ ನಿಟ್ಟಿನಲ್ಲಿ ಅತ್ಯುಚ್ಚ ನ್ಯಾಯಾಲಯ ಗಂಭೀರವಾಗಿ ವಿಚಾರ ಮಾಡಿ ಸಂಬಂಧಿಸಿದವರಿಗೆ ಸೂಕ್ತ ಎಚ್ಚರಿಕೆಯನ್ನು ನೀಡಬೇಕಲ್ಲದೆ ರೈತರ ಸ್ಥಿತಿ–ಗತಿ ಸುಧಾರಿಸಲು ತಕ್ಷಣವೇ ಆದ್ಯತೆಯ ಮೇಲೆ ಕ್ರಮ ಕೈಗೊಳ್ಳಬೇಕಾಗಿದೆ. ಇಲ್ಲದೆ ಹೋದರೆ ಅತಿ ಶೀಘ್ರದಲ್ಲಿಯೇ ದೇಶದಲ್ಲಿ ತೀವ್ರ ಆಹಾರದ ಅಭಾವ ತಲೆದೋರಿ ಕ್ರಾಂತಿ ಸಂಭವಿಸುವ ದಿನಗಳು ದೂರವಿಲ್ಲ. ❑





# 'ಅಂತಹ ಪವಿತ್ರ ಕ್ಷೇತ್ರಕ್ಕೆ ಚಪ್ಪಲಿ ಹಾಕಿಕೊಂಡು ಹೋಗಬಾರದಪ್ಪ'

–ಎಂ.ಬಿ. ಸದಾಶಿವಯ್ಯ *

ಒಂದು ದಿನ ರಾತ್ರಿ ಸುಮರು ೮ ಗಂಟೆ ಸಮಯ, ನನ್ನ ತಂದೆ ಶ್ರೀ ಜಿ. ವೀರಭದ್ರಯ್ಯನವರು, ತುಮಕೂರಿನ ನನ್ನ ಮನೆಗೆ ಬಂದರು. ಪ್ರಯಾಣದ ಬಳಲಿಕೆ, ಒಂದು ಕೈಯಲ್ಲಿ ಕೈಚೀಲ ಮತ್ತು ಹೆಗಲ ಮೇಲೆ ಸುಮಾರು ೩೦ ಕೆ.ಜಿ.ಯ ಅಕ್ಕಿಯ ಚೀಲ, ಪ್ರಯಾಣದ ದಣಿವು ಮತ್ತು ಉಭಯ ಕುಶಲೋಪರಿ ನಂತರ ನಾನು ಸಂತೋಷದಿಂದ, ನಾನು ನನ್ನ ತಂದೆಯವರು ನನ್ನ ಮನೆಗೆ ಊರಿಂದ ಅಕ್ಕಿಯನ್ನು ತಂದಿದ್ದಾರೆಂದು ಮನದಲ್ಲೇ ಬೀಗುತ್ತಾ, ಅಕ್ಕಿಯ ಚೀಲವನ್ನು ಮನೆಯ ಹಾಲಿನಿಂದ ಅಡುಗೆ ಮನೆಗೆ ತೆಗೆದುಕೊಂಡು ಹೋಗಲೆತ್ನಿಸಿದೆ. ಆಗ ಥಟ್ಟನೆ ಅವರು 'ಅದು ನಿನಗಲ್ಲಪ್ಪಾ, ಅದು ಸಿದ್ಧಗಂಗಾ ಮಠಕ್ಕೆ' ಎಂದರು. ಅವರ ನಿಸ್ವಾರ್ಥತೆ ಮುಂದೆ ನನ್ನ ಸ್ವಾರ್ಥ ನಾಚಿಕೆಯಿಂದ ತಲೆ ತಗ್ಗಿಸಿತು.

ಪ್ರತಿ ತಿಂಗಳಿಗೊಮ್ಮೆ ನಾನು ನನ್ನ ಗ್ರಾಮಕ್ಕೆ ಭೇಟಿ ನೀಡುವುದು ನನ್ನ ಪರಿಪಾಠ. ತಂದೆ ತಾಯಿಗಳನ್ನು, ತಮ್ಮನ ಕುಟುಂಬವನ್ನು ನೋಡಿ, ಕಷ್ಟ ಸುಖಗಳನ್ನು ವಿಚಾರಿಸಿ ಬರುವ ಉದ್ದೇಶ ಮತ್ತು ಕರ್ತವ್ಯ, ಪ್ರತಿಸಲ ಊರಿಗೆ ಹೋಗಿ, ತಂದೆಯವರನ್ನು ಕಂಡ ತಕ್ಷಣ ಅವರ ಬಾಯಿಂದ ಬರುತ್ತಿದ್ದ ಮೊದಲ ಪ್ರಶ್ನೆ 'ಸ್ವಾಮೀಜಿ ಯವರು ಚನ್ನಾಗಿದ್ದಾರೇನಪ್ಪಾ?' ನಂತರ ಜ್ಞಾಪಕಬಂದರೆ ಮತ್ತೊಂದು ಪ್ರಶ್ನೆ 'ನಿನ್ನ ಕುಟುಂಬ ಮತ್ತು ಮಕ್ಕಳು ಆರೋಗ್ಯನಾ?' ಇದರಲ್ಲಿ ಯಾವ ಅತಿಶಯೋಕ್ತಿ ಇಲ್ಲ. ಮೊದಲಿಗೆ ನನ್ನ ಕುಟುಂಬ ಮತ್ತು ನನ್ನ ಯೋಗಕ್ಷೇಮ ವಿಚಾರಿಸಲಿಲ್ಲವಲ್ಲಾ! ಮೊದಲು ಸ್ವಾಮೀಜಿಂಯುವರು ಜ್ಞಾಪಕಕ್ಕೆ ಬರುತ್ತಾರಾ ನಮ್ಮ ತಂದೆಯವರಿಗೆ? ಇದು ನನ್ನ ನೋವು ಮತ್ತು ನನ್ನ ಸಣ್ಣತನ.

ನಮ್ಮ ತಂದೆಯವರು ವೃತ್ತಿಯಲ್ಲಿ ಪ್ರೈಮರಿ ಶಾಲೆಯ ಅಧ್ಯಾಪಕರು, ಸೇವೆಯಲ್ಲಿದ್ದಾಗ ಸಾಕಷ್ಟು ಸಲ ತಮ್ಮ ಅಲ್ಪ ಕಾಣಿಕೆಯನ್ನು ಶ್ರೀಕ್ಷೇತ್ರಕ್ಕೆ ತಲುಪಿಸುತ್ತಿದ್ದರು. ನಿವೃತ್ತಿ ನಂತರ, ಇತ್ತೀಚೆಗೆ ಅವರಿಗೆ ಬರುತ್ತಿದ್ದ ನಿವೃತ್ತಿ ವೇತನ ೪೦೦೦/– ರೂಗಳು. ಅದರಲ್ಲಿ ೩೦೦೦/– ರೂಗಳನ್ನು ನನಗೆ ಕೊಟ್ಟು ಶ್ರೀಕ್ಷೇತ್ರಕ್ಕೆ ತಲುಪಿಸಿ, ರಸೀದಿ ತಮಗೆ ತಲುಪಿಸಬೇಕೆಂಬ ಕಟ್ಟಪ್ಪಣೆ. ಮುಂದಿನ ತಿಂಗಳು ಊರಿಗೆ ಹೋದಾಗ 'ರಸೀದಿ ತಂದೆಯಾ' ಇದು ಅವರ ಮೂರನೆಯ ಪ್ರಶ್ನೆ. ರಸೀದಿಯನ್ನು ಅವರ ಕೈಗೆ ಕೊಟ್ಟರೆ, ಅದರಲ್ಲಿನ ಪರಮಪೂಜ್ಯರ ಹಸ್ತಾಕ್ಷರ ನೋಡಿ ಧನ್ಯಭಾವ ದಿಂದ ಕಣ್ಣಿಗೆ ಹೊತ್ತಿಕೊಂಡು, ರಸೀದಿ ಯನ್ನು ಮಡಚಿ, ತಮ್ಮ ಜೇಬಿನಲ್ಲಿಟ್ಟುಕೊಂಡಾಗ, ಅವರ ಮುಖದಲ್ಲಿನ ಸಂತೃಪ್ತಿ ಹೇಳತೀರದು.

ಪ್ರತಿತಿಂಗಳು ತಂದೆಯವರು ಕೊಟ್ಟ ಕಾಣಿಕೆಯನ್ನು ಶ್ರೀಕ್ಷೇತ್ರಕ್ಕೆ ತಲುಪಿಸಲು ಹೋದಾಗ, ಅಂದಿನ ಆಡಳಿತಾಧಿಕಾರಿ ಗಳಾದ ಶ್ರೀಮಾನ್ ಪುಟ್ಟಶಂಕರಯ್ಯನವರ ಆಶ್ಚರ್ಯಕರ ಪ್ರಶ್ನೆ 'ಇನ್ನು ಮೊನ್ನೆ ಕೊಟ್ಟಿರಲ್ಲವಾ?' ಆಗ ನಾನು, ತಂದೆಯುವರ ಭಾವನೆಗಳು, ಅವರ ಭಕ್ತಿ, ಕಾಣಿಕೆ ತಿಳಿಸುತ್ತಿದ್ದಾಗ, ಸುತ್ತಮುತ್ತಲಿನ ಜನ ಮೂಕ ರಾಗುತ್ತಿದ್ದರು. ಗುರು ಋಣ, ಸಂಸ್ಥೆಯ ಋಣ ತೀರಿಸುವಲ್ಲಿ ನಮ್ಮ ತಂದೆಯವರು ಅಗ್ರ ಪಂಕ್ತಿ ಎಂದರೆ ತಪ್ಪಾಗಲಾರದು.

ನಮ್ಮ ತಂದೆಯವರು ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಸದಸ್ಯರು. ಹಳೆಯ ವಿದ್ಯಾರ್ಥಿ ಸಂಘದಿಂದ ಸಭೆ, ಕಾಣಿಕೆ ಹಾಗೂ ವಂತಿಕೆ ಬಗ್ಗೆ ಪತ್ರ ಬಂದರೆ ಸಾಕು, ಅದು ಅವರ ಪಾಲಿಗೆ ಪತ್ರವಾಗಿರಲಿಲ್ಲ, ಅದು ಒಂದು ಆಜ್ಞಾಪನೆ ಯಾಗುತ್ತಿತ್ತು. ಶ್ರೀಕ್ಷೇತ್ರಕ್ಕೆ ಬಂದು ವಂತಿಕೆ ಕೊಟ್ಟು ಬರುತ್ತಿದ್ದರು.

ಶ್ರೀ ಸ್ವಾಮೀಜಿಯವರ ಬೆಳ್ಳಿ ಹಬ್ಬದ ಆಚರಣೆಯ ಸಂದರ್ಭ, ಹಳೆಯ ವಿದ್ಯಾರ್ಥಿ ಸಂಘದ ಸಭೆಗೆ ಹಾಜರಾಗಿ, ಹಲವು ಸದಸ್ಯರಂತೆ, ೫೦ ಹಾಳೆಗಳುಳ್ಳ ರಸೀದಿ ಪುಸ್ತಕವನ್ನು (ಬೆಳ್ಳಿ ಹಬ್ಬಕ್ಕೆ ಸಂಗ್ರಹಿಸುವ) ನಮ್ಮ ಊರಾದ ಗುಡ್ಡದಹಳ್ಳಿಗೆ ಸಂಪೂರ್ಣ ಹಣಸಂಗ್ರಹಿಸುವ ಗುರಿ ಹೊಂದಿ ತಂದು ಬಿಟ್ಟರು. ಆದರೆ ನಮ್ಮ ಗ್ರಾಮ, ಒಂದು ಕುಗ್ರಾಮ. ಆಂಧ್ರದ ಗಡಿಯಲ್ಲಿ, ಅತಿ ಹಿಂದುಳಿದ ಮತ್ತು ಬಡತನದಿಂದ ತುಂಬಿರುವ ಪುಟ್ಟಹಳ್ಳಿ, ಪರಿಚಯಸ್ತರ ಮನೆಗೆ ಹೋಗಿ ಸಿದ್ಧಗಂಗೆಯ ಮಹತ್ವ, ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಸಾಧನೆಗಳು, ಅವರಿಗೆ ಸವಿಸ್ತಾರ ವಾಗಿ ತಿಳಿಹೇಳಿ ವಂತಿಗೆ ಕೇಳಿದಾಗ, ಅಲ್ಲಿನ ಜನರು ಎಂಟಾಣೆ, ಒಂದು ರೂಪಾಯಿ ಕೊಡಲು ಶಕ್ತರಾಗಿದ್ದರು. ರಸೀದಿ ಪುಸ್ತಕದ ಸುಮಾರು ಹಾಳೆಗಳು ಹಾಗೆಯೇ ಉಳಿದುಕೊಂಡಿದ್ದವು. ನಾನು ಇದೆಲ್ಲವನ್ನು ಗಮನಿಸುತ್ತಿದ್ದೆ. ಒಂದು ಸಂಜೆ ತಮ್ಮ ಪೂಜೆ ಮುಗಿಸಿ, ತಂದೆಯವರು ನಮ್ಮ ತಾಯಿಯವರ,

* ನಿವೃತ್ತ ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ಪದವಿ ಕಾಲೇಜು, ತುಮಕೂರು.

ತಮ್ಮ ಮಕ್ಕಳ, ಎಲ್ಲರ ಹೆಸರಿನಲ್ಲೂ ತಲಾ ೫೦.೦೦ರೂ ನಂತೆ ರಸೀದಿ ಬರೆದು ಪುಸ್ತಕದ ಪೂರ್ತಿ ಮೊತ್ತವನ್ನು ತಮ್ಮ ಕೈಯಿಂದ ತುಂಬಿಸಿ ಶ್ರೀಕ್ಷೇತ್ರಕ್ಕೆ ತಲುಪಿಸಿದರು. ಎಂತಹ ಬದ್ಧತೆ ! ಮತ್ತು ಕರ್ತವ್ಯಪ್ರಜ್ಞೆ!

ವರ್ಷದಲ್ಲಿ ಎರಡು ಬಾರಿ ಶ್ರೀಕ್ಷೇತ್ರಕ್ಕೆ ತಪ್ಪದೇ ಬರುವುದು ಅವರ ರೂಢಿ. ತುಮಕೂರಿನ ನಮ್ಮ ಮನೆಗೆ ಬಂದು ಸ್ನಾನ, ಪೂಜೆ, ಫಲಾಹಾರ ಮುಗಿಸಿ, ಬರಿಗಾಲಲ್ಲಿ ಶ್ರೀಕ್ಷೇತ್ರಕ್ಕೆ ನಡೆದುಕೊಂಡು ಹೋಗಿಬರುತ್ತಿದ್ದರು. ಹೀಗೇಕೆಂದು ನಾನು ಪ್ರಶ್ನಿಸಿದರೆ ಅವರ ಉತ್ತರ **'ಅಂತಹ ಪವಿತ್ರ ಕ್ಷೇತ್ರಕ್ಕೆ ಚಪ್ಪಲಿ ಹಾಕಿಕೊಂಡು ಹೋಗಬಾರದಪ್ಪಾ!'**

ನಾನು ಊರಿಗೆ ಹೋದಾಗಲೆಲ್ಲಾ ನನ್ನ ಕಷ್ಟಸುಖ ಗಳಾಗಲಿ, ಸಂಸಾರದ ವಿಷಯಗಳಾಗಲಿ ಮಾತ ನಾಡುತ್ತಿದ್ದುದು ಬಹಳ ಕಡಿಮೆ. ಹೆಚ್ಚು ಪಾಲು ಶ್ರೀಕ್ಷೇತ್ರದ ಬಗ್ಗೆ, ಸ್ವಾಮೀಜಿಯ ಬಗ್ಗೆ, ಮತ್ತು ನಮ್ಮ ತಂದೆಯವರ ಶ್ರೀಕ್ಷೇತ್ರದಲ್ಲಿನ ವಿದ್ಯಾರ್ಥಿ ಜೀವನದ ಬಗ್ಗೆ ಮೆಲುಕು ಹಾಕುತ್ತಿದ್ದರು.

ಪ್ರಮುಖವಾಗಿ ಎರಡು ಘಟನೆಗಳನ್ನು ಇಲ್ಲಿ ಸ್ಮರಿಸಲೇ ಬೇಕು. ಹಳೆಯ ಮಠದಲ್ಲಿ ಪೂಜ್ಯ ಉದ್ದಾನ ಶಿವಯೋಗಿಗಳ ಪೂಜೆಗೆ ನಮ್ಮ ತಂದೆಯವರು ಅಣಿ ಮಾಡುತ್ತಿದ್ದ ದಿನಗಳು, ಒಂದು ದಿನ ಜಡಿಮಳೆಯಲ್ಲಿ ಮಠದ ಮುಂಭಾಗದ ಬಿಲ್ವಮರ ಹತ್ತಿ ಪತ್ರೆ ಬಿಡಿಸುತ್ತಿದ್ದ ವೇಳೆಯಲ್ಲಿ ಶ್ರೀ ಉದ್ದಾನಸ್ವಾಮಿಗಳು ಇದನ್ನು ಗಮನಿಸಿ ತಕ್ಷಣ 'ವೀರಭದ್ರಯ್ಯ, ಮಳೆ ಬರುತ್ತಿದೆ, ಸಾಕು ಕೆಳಗೆ ಇಳಿ, ಏನಾದರೂ ಕಾಲು ಜಾರಿಬಿದ್ದರೆ ಯಾರಾಗುತ್ತಾರೆ? ಬೆಟ್ಟದಂತಾ ದೇವರಿಗೆ ಬೆಟ್ಟದಷ್ಟು ಪತ್ರೆ ನೀಡಲು ಸಾಧ್ಯವಾ?' ಎಂಥಹ ಮಮಕಾರದ ಮನಸು ಸ್ವಾಮಿಗಳವರದು!' ಇದು ಅವರ ಮೆಲುಕು.

೧೯೩೦-೩೩ರಲ್ಲಿ ಅವರು ೭, ೮, ೯ತರಗತಿವರೆಗೂ ಶ್ರೀಕ್ಷೇತ್ರದಲ್ಲಿ ಅಭ್ಯಾಸ ಮಾಡಿದ ಕಾಲ. ಅಂದು ಹಸಿದ ಚಿಕ್ಕಮಕ್ಕಳಿಗೆ ತೆಂಗಿನಕಾಯಿಯ ಓಳು ಸಿಕ್ಕರೆ ಅವರ ಸಂತೋಷಕ್ಕೆ ಮಿಗಿಲೇ ಇಲ್ಲ. ದೇವರ ಪೂಜೆ ಮುಗಿಸಿ ಕಾಯಿ ಹೊಡೆದುಕೊಂಡು ಬಂದ ಸಂದರ್ಭದಲ್ಲಿ ಪೂಜ್ಯರು ಇವರಿಗೆ ಓಳು ಕೊಟ್ಟಾಗ ಅಮೃತ ಸಿಕ್ಕಷ್ಟೇ ಸಂತೋಷ. ಇಂತಹ ಘಟನೆಗಳನ್ನು ಇಂದಿಗೂ ನೆನೆಯುತ್ತಿದ್ದರು.

ನಮ್ಮ ತಂದೆಯವರು ಸಿದ್ಧಗಂಗಾ ಮಾಸಪತ್ರಿಕೆಯ ಅಜೀವ ಚಂದಾದಾರರು. ಇಂದಿಗೂ ನಮ್ಮ ಗ್ರಾಮ ಒಂದು ಕುಗ್ರಾಮವೇ ಅನಕ್ಷರಸ್ಥರೇ ಹೆಚ್ಚು. ಅಕ್ಷರಸ್ಥರಲ್ಲಿ ತೆಲುಗು ಶಾಲೆಯಲ್ಲಿ, ತೆಲುಗು ಅಕ್ಷರದಲ್ಲಿ ಕಲಿತವರು. ಅವರೆಲ್ಲರೂ ನಮ್ಮ ತಂದೆಯವರ ಶಿಷ್ಯರೇ. ಅವರ ಮನೆಗಳಿಗೆ ಹೋಗಿ, ತಾವು ಓದಿದ ಸಿದ್ಧಗಂಗಾ ಪತ್ರಿಕೆಯಲ್ಲಿನ ಅಮೂಲ್ಯವಾದ ಲೇಖನಗಳನ್ನು ಓದಿರೆಂದು ಊರಲ್ಲಿ ಮನೆ ಮನೆಗೂ ಕೊಟ್ಟು ಬರುತ್ತಿದ್ದು ಶ್ರೀಕ್ಷೇತ್ರದ ಬಗ್ಗೆ, ಶ್ರೀ ಸ್ವಾಮೀಜಿಯವರ ನಿಸ್ವಾರ್ಥ ಸೇವೆ ಬಗ್ಗೆ ಅರಿವು ಉಂಟು ಮಾಡುತ್ತಿದ್ದರು. 'ಇಲ್ಲಿ ಶ್ರೀ ಶಿವಕುಮಾರಮಹಾಸ್ವಾಮಿಗಳು ೧೦,೦೦೦ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಿದ್ದಾರೆ' ಎಂದು ಹೆಮ್ಮೆಯಿಂದ ಬೀಗುತ್ತಿದ್ದರು.

ನಾನು ಊರಿಗೆ ಹೋದ ಸಮಯದಲ್ಲಿ, ಶ್ರೀಮಠದ ಬಗ್ಗೆ, ಸ್ವಾಮಿಗಳ ಬಗ್ಗೆ ನಾನೇನಾದರೂ ಮಾತನಾಡಿದರೆ, ಅವರ ಮೈ ರೋಮಾಂಚನಗೊಂಡು ಅವರು ಭಕ್ತಿಪರವಶ ರಾಗುತ್ತಿದ್ದರು. ಇಂದಿಗೂ ಸಹ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯ ನವರು ಮತ್ತು ನನ್ನ ಹಿರಿಯರಾದ ಶ್ರೀ ಹೆಚ್.ವಿ.ವೀರಭದ್ರಯ್ಯನವರು ನಮ್ಮ ತಂದೆಯವರನ್ನು ಮತ್ತು ಅವರ ಸನ್ನಡತೆಯನ್ನು ಆಗಾಗ ನೆನೆಯುತ್ತಾರೆ.

ಈ ಲೇಖನ ನಮ್ಮ ತಂದೆಯವರ ಶ್ರೀಕ್ಷೇತ್ರದ ಒಡನಾಟ, ಅವರ ಜೀವನದ ಒಂದು ಮುಖ ಮಾತ್ರ. ಅವರು ಅಪ್ಪಟ ಗಾಂಧಿ ಅನುಯಾಯಿ, ನಿಜವಾದ ಶರಣರು. ಸರಳ ಸಜ್ಜನಿಕೆ ಮೈಗೂಡಿಸಿಕೊಂಡು, ಅಹಿಂಸಾ ಸಿದ್ಧಾಂತಗಳಲ್ಲಿ ಅಚಲ ನಂಬಿಕೆ ಉಳ್ಳವರು. 'ದಯವೇ ಧರ್ಮದ ಮೂಲವಯ್ಯಾ' ಎಂಬುದು ಅವರ ಮೂಲಮಂತ್ರ. ಜಾತಿಭೇದವಿಲ್ಲದೆ, ವಿಶೇಷವಾಗಿ ಮಕ್ಕಳನ್ನು ಕಂಡರೆ ಅಪಾರ ಮಮಕಾರ. ಅವರು ಮಡಕಶಿರಾ ತಾಲ್ಲೂಕಿನಲ್ಲೇ ಉತ್ತಮ ಮತ್ತು ಆದರ್ಶ ಅಧ್ಯಾಪಕರೆಂದು ಹೆಸರುಗಳಿಸಿದ್ದರು.

ಇದೆಲ್ಲಾ, ನನ್ನ ದೃಷ್ಟಿಯಲ್ಲಿ ಸಿದ್ಧಗಂಗೆಯ ಮಹಿಮೆ ಮತ್ತು ಮಹಿಮಾಪುರುಷರಾದ ಶ್ರೀ ಶಿವಕುಮಾರಮಹಾಸ್ವಾಮಿ ಗಳವರ ಕೃಪಾಶೀರ್ವಾದ.

ಮಡಕಶಿರಾ ತಾ॥ ಗುಡ್ಡದಹಳ್ಳಿಯಲ್ಲಿ ಮಾನ್ಯಶ್ರೀ ನಂಜಯ್ಯ ಮತ್ತು ಶ್ರೀಮತಿ ಗೌರಮ್ಮನವರ ಎರಡನೆಯ ಮಗನಾಗಿ ಜನಿಸಿದ ಗುಡ್ಡದಹಳ್ಳಿಯ ಗುಡ್ಡಸಿರಿ ಶ್ರೀ ಜಿ.ವೀರಭದ್ರಯ್ಯನವರು ಹಿಂದೂಪುರ, ಸಿದ್ಧಗಂಗೆ ಮತ್ತು ಅನಂತಪುರದಲ್ಲಿ ವಿದ್ಯಾಭ್ಯಾಸ ಮುಗಿಸಿ ಸುಮಾರು ೫೫ ವರುಷ ತೆಲುಗು ಶಾಲೆಯಲ್ಲಿ ಸೇವೆ ಸಲ್ಲಿಸಿ, ೯೨ ವರುಷ ತುಂಬು ಕುಟುಂಬ ನಾಲ್ಕು ಗಂಡು ಮಕ್ಕಳು, ಐದು ಹೆಣ್ಣು ಮಕ್ಕಳು. ಎಲ್ಲರೂ ಪರಮಪೂಜ್ಯರ ಆಶೀರ್ವಾದ ಮತ್ತು ತಂದೆಯವರ ಮಾರ್ಗದರ್ಶನದಲ್ಲಿ ಉತ್ತಮ ಮತ್ತು ಸಂತೃಪ್ತಿಯ ಜೀವನವನ್ನು ನಡೆಸುತ್ತಿದ್ದಾರೆ. ❑







## ನಿಸರ್ಗದ ಕಣ್ಣು

–ಈರಯ್ಯ ಕಿಲ್ಲೇದಾರ *

**ಈ** ಸೃಷ್ಟಿ ಎಲ್ಲವೂ ದೈವ ಸೃಷ್ಟಿ. ಅಂತೆಯೇ ನಿಸರ್ಗವನ್ನು ದೈವ ಎಂದೇ ಆರಾಧಿಸಲಾಗುತ್ತಿದೆ. ಷಿಂಟೋ ಎಂಬುದು ಜಪಾನಿಯರ ಮೂಲಧರ್ಮ. ಷಿಂಟೋ ಎಂದರೆ ಪ್ರಕೃತಿಯ ಪೂಜೆ. ಮನುಷ್ಯ ನಿಸರ್ಗದ ಕೂಸು. ನಿಸರ್ಗದ ನೈಪುಣ್ಯತೆಯ ಅನುಕರಣೆಯ ಮೂಲಕ ಮನುಷ್ಯ ಬೆಳೆಯುತ್ತಾನೆ. ನಿಸರ್ಗದ ಮಡಿಲಲ್ಲಿ ಹುಟ್ಟಿ, ಆಡಿ, ಓಡಾಡಿ ಕೊನೆಗೆ ನಿಸರ್ಗದ ಮಡಿಲಲ್ಲೇ ಲೀನವಾಗುತ್ತಾನೆ. ನಿಸರ್ಗದ ಪಾಠ ಮನುಷ್ಯನ ಬದುಕಿನ ಪಾಠವೇ ಆಗಿದೆ. ನಿಸರ್ಗದ ನೈಪುಣ್ಯತೆಯ ಮುಂದೆ ಮನುಷ್ಯನ ನೈಪುಣ್ಯತೆ ನಗಣ್ಯ. ನಿಸರ್ಗದ ಬಾಹ್ಯ ಸೊಬಗು ವಿಜ್ಞಾನ ಮತ್ತು ತರ್ಕದ ವಿಶ್ಲೇಷಣೆಗೆ ನಿಲುಕಲಾರವು. ಹೀಗಿದ್ದೂ ಮನುಷ್ಯ ನಿಸರ್ಗ ದೊಡನೆ ಹೋರಾಡುತ್ತಲೇ ಇದ್ದಾನೆ. ಮನುಷ್ಯನ ಸೃಜನಾತ್ಮಕ ಅಭಿವ್ಯಕ್ತಿಗೆ ಪ್ರಕೃತಿಯೇ ಮೂಲ ಸೆಲೆ. ಅದ ರಿಂದಲೇ ಸಂಸ್ಕೃತಿಯ ನಯನ ಮನೋಹರ ಹೂವಾಗಿ (ಕೃತಿಯಾಗಿ) ಅರಳಿ ಸುಗಂಧ ನೀರುತ್ತದೆ.

ಪ್ರಕೃತಿಯ ಸೌಂದರ್ಯ ಮತ್ತು ಲೀಲೆ ದಿನದಿನವು ಹೊಸಹೊಸತಾಗುತ್ತ ಮನುಷ್ಯನನ್ನು ಬೆರಗುಗೊಳಿಸುತ್ತದೆ. ಪ್ರಕೃತಿಯ ಸೌಂದರ್ಯವನ್ನು ಸವಿಯುವ ಸಹೃದಯರಿಗೆ ಮಾತ್ರ ಕಾಣುತ್ತದೆ. ವೈಜ್ಞಾನಿಕ ದೃಷ್ಟಿಕೋನ ಅಳವಡಿಸಿಕೊಳ್ಳಬೇಕೆಂದು ಉಪದೇಶದ ಮಾತುಗಳು ಕೇಳಿ ಬರುತ್ತಿವೆ. ಮನುಷ್ಯ ನೋಡುವ ನೋಟ, ಕಾಣುವ ಕಣ್ಣು ಬೇರೆ ಬೇರೆ ಆಗಿವೆ. ನಿದರ್ಶನಕ್ಕೆ ಹೇಳಬೇಕೆಂದರೆ, ಕಾಮದ ಕಣ್ಣು, ಧರ್ಮದ ಕಣ್ಣು, ಜಾತಿಯಕಣ್ಣು, ಲಾಭದ ಕಣ್ಣು, ಸ್ವಾರ್ಥದ ಕಣ್ಣು ಮತ್ತು ಆಸೆಯ ಕಣ್ಣು. ಹೀಗೆ ಬೇರೆ ಬೇರೆ ಕಣ್ಣಿನಿಂದ ನೋಡಲು ಹೋಗಿ ನಮ್ಮ ನೋಟ ಕೆಟ್ಟು ಹೋಗಿದೆ. ನಿಸರ್ಗದ ಕಣ್ಣಿನಿಂದ ನೋಡುವಂತಾದಾಗಲೇ ಮನುಷ್ಯ ಪ್ರಕೃತಿಯನ್ನು ಅರಿಯಬಲ್ಲ. ಪ್ರಕೃತಿಯೊಡನೆ ಸಮರಸದಿಂದ ಬದುಕಿ ಬಾಳಬಲ್ಲ.

ಚಿತ್ರಕಲೆ, ಸಾಹಿತ್ಯ, ಸಂಗೀತ, ಲಲಿತಕಲೆ ಇವಷ್ಟೆ ಸೃಜನ ಶೀಲ ಕಲೆ ಅಲ್ಲ. ಯಾರ ಮೈಮನಗಳಲ್ಲಿ ಪ್ರಕೃತಿ ಪ್ರೇಮ ತುಂಬಿಕೊಂಡಿದೆಯೋ ಆತ ತತ್ವಜ್ಞಾನಿಯೋ ವಿಜ್ಞಾನಿಯೋ ಆಗಿರುತ್ತಾನೆ. ಪ್ರಕೃತಿಯ ಒಡಲಿನ ವೀಣೆಯನ್ನು ನುಡಿಸಬಲ್ಲ ವೈಣಿಕನಿಗೆ ಇದೆಲ್ಲವೂ ಸಾಧ್ಯ. ಪ್ರಕೃತಿಯ ಆರಾಧನೆ ಮಾಡದ ಕವಿ ಕಲಾವಿದರೇ ಇರಲಾರದು. ನಿಸರ್ಗದ ಚೆಲುವನ್ನು ಗ್ರಹಿಸಿ, ನಿಸರ್ಗದ ಚಿತ್ರವನ್ನು ಬಿಡಿಸಬಲ್ಲವ ಯಶಸ್ವಿ ಬರಹ ಗಾರನಾಗುತ್ತಾನೆ. ಬುದ್ಧಿ ಭಾವಗಳ ವಿದ್ಯುದಾಲಿಂಗನ ಪ್ರಕೃತಿಯ ಚಿತ್ರದಲ್ಲಿ ಒಡಮೂಡಿಸಬಲ್ಲ. **'ಸೂರ್ಯೋದಯ ಚಂದ್ರೋದಯ ದೇವರ ದಯೆ ಕಾಣೋ'** ರಾಷ್ಟ್ರಕವಿ ಕುವೆಂಪು ಅವರು ದಿನದಿನವೂ ಮೂಡುವ ಸೂರ್ಯಚಂದ್ರರು ದೇವರ ಅಸ್ತಿತ್ವ ಎಂದೇ ಭಾವಿಸಿದ್ದಾರೆ'. **'ಮೂಡಲ ಮನೆಯ ಮುತ್ತಿನ ನೀರಿನ ಎರಕವಾ ಹೊಯ್ದ'** ಎಂದು ಬೆಳಗಿನ ಬೆರಗನ್ನು ಬೇಂದ್ರೆಯವರು ಕಂಡು ಬೆರಗಾಗಿದ್ದಾರೆ.

ಬ್ಯಾಸಿಗಿ ಬಿಸಿಲಿಗೆ ಬಾಯಾರಿಗೆ ಒಣಭೂಮಿಯ ತಣಿಸುವ ಮಳೆರಾಯನ ಬರುವಿಕೆಗೆ ಕಾತರಿಸಿ ಕೂಡ್ರುವ ಭೂಮಿ, ನಿರೀಕ್ಷೆಯ ಮೋಡ ಕರಗಿ ಗುಡುಗು ಸಿಡಿಲಿನ ಆರ್ಭಟದಿಂದ ಸುರಿವ ಮಳೆ. ಬೀಳುವ ಒಂದೊಂದು ಹನಿ ಹನಿ ಮಳೆಗೆ ಅರಳಿದ ಮಣ್ಣಿನ ನಸುಗಂಪಿನ ಪರಿಮಳ, ಬಿರುಕು ತುಂಬಿ ತೃಪ್ತಿಯಿಂದ ಬೀಗುವ ಮಣ್ಣಿನ ಮೇಲೆ ಬಿಡಿಸಿದ ಚಿತ್ರ. ರಭಸದಿಂದ ಭೋರ್ಗರೆದು ಹರಿವ ನೀರು. ತುಂಬಿದ ಕೆರೆ. ಒಂದೊಂದು ಚಿತ್ರವೂ ಒಂದೊಂದು ಕಥೆ ಹೇಳುತ್ತದೆ. ಹದ ನೋಡಿ ಹರಗುವ ಬೆದೆ ನೋಡಿ ಬಿತ್ತುವ ಬೀಜ ಮೊಳೆಯುವ ಒಂದೆಲೆ ಎರಡೆಲೆಯಾಗಿ ಬೆಳೆದು ಕಂಗೊಳಿಸುವ, ಮೊಗ್ಗು ಹೂವಾಗುವ ಹೂವು ಕಾಯಾಗುವ ಕಾಯಿ ಬಲಿತು ಹಣ್ಣಾಗುವ ಪ್ರಕ್ರಿಯೆ ಎಲ್ಲವೂ ಸೃಜನಶೀಲ ಕೃತಿಗಳೇ. ಗಿಡಗಂಟೆಯೊ ಕೊರಳೊಳಗಿಂದ ಕೇಳಿ ಬರುವ ಹಕ್ಕಿಯ ಹಾಡು. ಹಸು ತನ್ನ ಕರುವನ್ನು ಕರೆವ ಕರು 'ಅಂಬಾ' ಎಂದು ಓಡುವ ನೀಲಾಕಾಶಕ್ಕೆ ಕನ್ನಡಿಯಾದ ಜಲರಾಶಿ. ಹೊಚ್ಚ ಹೊಸತಾದ ಬೆಳಗು. ಬಾಡಿದರೂ ಹೊಂಬಣ್ಣದಿ ಹೊಳೆವ ಸಂಜೆಗೆಂಪಿನ ಸೂರ್ಯ. ಹೂವಿನ ಪಕಳೆಕಳೆಗಳೂ ಎಳೆಬಿಸಿಲಿಗೆ ಮುತ್ತಿನಂತೆ ಹೊಳೆವ ಮಂಜಿನ ಹನಿಗಳು. ಗುಡ್ಡಗುಡ್ಡಗಳು ಸ್ಥಾವರಲಿಂಗ. ಕರಿ ಮೋಡದಲ್ಲಿ ಮೂಡುವ ಬಣ್ಣಬಣ್ಣದ ಕಾಮನಬಿಲ್ಲು. ಕಣ್ಣಿಗೆ ಕಾಣದಿದ್ದರೂ ಬೀಸುವ ಗಾಳಿಯ ಸಪ್ಪಳ. ತೇಲುವ ಮೋಡ. ಎಲ್ಲವೂ ನಿಸರ್ಗದ ಚೆಲುವೇ ಆಗಿದೆ. ಚೆಲುವೆಲ್ಲಾ ತನ್ನದೇ ಎಂದು ಗೆಲುವಿನಿಂದ ನಿಸರ್ಗ ಕಣ್ಮುಂದೆ ಕುಣಿಯುತ್ತದೆ. ಪ್ರಕೃತಿಯ ಶಬ್ದಾತೀತ ಮಹಾಕಾವ್ಯ ಇದಾಗಿದೆ. ಈ ಮಹಾ ಕಾವ್ಯವನ್ನು ಓದಲು ಕಲಿಯಬೇಕಿದೆ.

ಹೂವಿಗೆ ಮನಸ್ಸಿನ ಕಲ್ಮಶವನ್ನು ದೂರಮಾಡುವ ಶಕ್ತಿ ಇದೆ. ಹೂವರಳಿದಂತೆಯೇ ಮುದುಡಿದ ಮನಸ್ಸು ಅರಳುವುದು. ಹೂವಿನ ಸುಗಂಧದಂತೆ ಮನಸ್ಸು ಆನಂದದ ಸುಗಂಧ ಬೀರುತ್ತದೆ. ಮೈಯೆಲ್ಲಾ ಹೂವಾಗಿ ಅರಳಿ ಗಮಹಮಿಸುವ ನಿಗ್ಗೆಯ ಪರಿಮಳ ತೋಟದ ತುಂಬ. ಮಂಜು ಮುಸುಕಿದಾಗ ಗಿಡಮರಬಳ್ಳಿಗಳಲ್ಲಿ ಜೇಡ ಹೆಣೆದ ಬಲೆ ಅದ್ಭುತ ಚಿತ್ರ. ತಾನೇ ಹೆಣೆದ ಚಿತ್ರದ (ಬಲೆಯಲ್ಲಿ) ತಾನಿದ್ದೂ ಇಲ್ಲದ ಪರಿ! ಚೆಂಡುಹೂ, ದಂಡಿ ಹೂವು, ಗುಲಾಬಿಕೆನ್ನೆಯ ಹುಡುಗಿಯರು ಕಿಲಕಿಲನೆ ನಗುತಿಹರು. ಹೂವು ಹೂವಿನಲ್ಲೂ ಹೊಸ ಹೊಸ ಬಣ್ಣದ ಪಾತರ ಗಿತ್ತಿಗಳು! ಜೇನು, ದುಂಬಿಗಳು ಮಾವಿನ, ಬೇವಿನ, ನುಗ್ಗೆಯ ಹೂವುಗಳಲ್ಲಿ ಪರಿಮಳದ ಪಲ್ಲಕ್ಕಿ ಏರುತ್ತವೆ. ಪ್ರಕೃತಿಯೊಡನೆ ಮಾತಾಡಲು ನನ್ನ ತೋಟ ಪ್ರಕೃತಿಯ ಭಾಷೆಯನ್ನು ಕಲಿಸಿಕೊಟ್ಟಿದೆ. ❑

* 'ಈನಿಂಕೆ', ಕವಿತಾ ಪ್ರಕಾಶನ, ಗುಡಿಕಟ್ಟಿ, ಅಂಚೆ ಕ್ರ 591 104. ಬೆಳಗಾವಿ ಜಿಲ್ಲೆ.



# ವಚನಗಳಲ್ಲಿ ಇಷ್ಟಲಿಂಗಪೂಜೆ

-ರುದ್ರಮೂರ್ತಿ ಎಲೆರಾಂಪುರ *

*ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ*
*ಸ್ಥಾವರಕ್ಕೆರಗಲಾಗದು*
*ತನ್ನ ಪುರುಷನ ಬಿಟ್ಟನ್ಯಪುರುಷನ ಸಂಗ ಸಲುವುದೇ?*
*ಕರಸ್ಥಲದಲಿ ಲಿಂಗದೇವನಿದ್ದಂತೆ*
*ಧರೆಯ ಮೇಲಣ ಪ್ರತಿಷ್ಠೆಗಳಿಗೆರಗಿದೊಡೆ*
*ನರಕದಲ್ಲಿಕ್ಕುವ ನಮ್ಮ ಕೂಡಲಚೆನ್ನಸಂಗಮದೇವಾ.*

-ಚೆನ್ನಬಸವಣ್ಣ, ೩-೩೫೫

*ದೇವನೊಬ್ಬ ನಾಮಹಲವು*
*ಪರಮಪತಿವ್ರತೆಗೆ ಗಂಡನೊಬ್ಬ*
*ಮತ್ತೊಂದಕ್ಕೆರಗಿದಡೆ ಕಿವಿ-ಮೂಗ ಕೊಯ್ವನು*
*ಹಲವು ದೈವದ ಎಂಜಲ ತಿಂಬುವರನೇನೆಂಬೆ,*
*ಕೂಡಲಸಂಗಮದೇವ.* -ಬಸವಣ್ಣನವರು, ೧-೬೧೪

ದೇಹದ ಮೇಲೆ ಇಷ್ಟಲಿಂಗವನ್ನು ಧರಿಸಿ, ಅರ್ಚಿಸಿ, ಪೂಜಿಸಿದ ಬಳಿಕ ಯಾವುದೇ ಗುಡಿ-ಗೋಪುರ ಇತರೆ ದೇವರುಗಳನ್ನು ವಂದಿಸುವ ಪೂಜಿಸುವ ಅವಶ್ಯಕತೆ ಇಲ್ಲವೆನ್ನುತ್ತಾರೆ. ಶರಣನೇ ಸತಿಯಾಗಿ ಲಿಂಗವನ್ನೇ ಪತಿಯಾಗಿ ಭಾವಿಸಿ ಪೂಜಿಸಿದ ಬಳಿಕ ಇತರೆ ದೈವಗಳ ಹಿಂದೆ ಬಿದ್ದು ಅರ್ಚನೆ, ಪೂಜನೆ, ವ್ರತಗಳನ್ನು ಮಾಡಿದರೆ ಪತಿವ್ರತೆಯಾದ ಸತಿ ಮತ್ತೊಬ್ಬ ಪುರುಷನ ಹಿಂದೆ ಹೋದಂತೆ ಎಂದು ಹೇಳಿ ಹಲವು ದೈವದ ಹಿಂದೆ ಹರಿದಾಡುವುದು ಪ್ರಸಾದ ಸೇವಿಸುವುದು ಮಾಡಿದರೆ ಎಂಜಲು ತಿಂದಂತೆ ಎಂದು ಹೇಳುವುದರ ಮೂಲಕ ಏಕದೇವೋಪಾಸನೆ ಮಾಡುವಂತೆ ತಿಳಿಸುತ್ತಾರೆ.

*ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ*
*ತೀರ್ಥಕ್ಷೇತ್ರಕ್ಕೆ ಹೋಗಲೇಕಯ್ಯಾ ?*
*ಅಂಗದ ಮೇಲಣ ಲಿಂಗ ಕಲ್ಲ ತಾಗಿದರೆ*
*ಆವುದ ಘನವೆಂಬೆನಾವುದ ಕಿರಿದೆಂಬೆ !*
*ತಾಳ ಸಂಪುಟಕ್ಕೆ ಬಾರದ ಘನವನರಿಯದೆ ಕೆಟ್ಟರು.*
*ಜಂಗಮ ದರ್ಶನ ಶಿರಮುಟ್ಟೆ ಪಾವನ*
*ಲಿಂಗದರ್ಶನ ಕರ ಮುಟ್ಟೆ ಪಾವನ*
*ಹತ್ತಿರಿದ್ದ ಲಿಂಗವ ಹುಸಿಮಾಡಿ*
*ದೂರದಲ್ಲಿದ್ದ ಲಿಂಗಕ್ಕೆ ನಮಸ್ಕರಿಸುವ*
*ವ್ರತಗೇಡಿಯ ತೋರದಿರಯ್ಯ !*
*ಕೂಡಲಚೆನ್ನಸಂಗಯ್ಯಾ.*

-ಚೆನ್ನಬಸವಣ್ಣ ೩-೭೭

*ಹಾಲು ಹಿಡಿದು ಬೆಣ್ಣೆಯನರಸಲುಂಟೆ ?*
*ಲಿಂಗವ ಹಿಡಿದು ತೀರ್ಥಕ್ಷೇತ್ರಕ್ಕೆ ಹೋಗಲುಂಟೆ ?*
*ಲಿಂಗದ ಪಾದತೀರ್ಥ ಪ್ರಸಾದವ ಕೊಂಡು*
*ಅನ್ಯಬೋಧೆ ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ ?*
*ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದೆನಾದಡೆ*
*ತಡೆಯದೆ ಹುಟ್ಟಿಸುವನು ಶ್ವಾನನ ಗರ್ಭದಲ್ಲಿ*
*ಅದೆಂತೆಂದಡೆ ಶಿವಧರ್ಮ ಪುರಾಣದಲ್ಲಿ*
*'ಇಷ್ಟಲಿಂಗಮದಿಶ್ವಸ್ಯ ತೀರ್ಥಲಿಂಗಸ್ಯ ಪೂಜಕಃ ।*
*ಶ್ವಾನಯೋನಿಶತಂ ಗತ್ವಾ ಚಾಂಡಾಲ ಗೃಹ ಮಾಚರೇತ್॥'*
ಎಂದುದಾಗಿ
ಇದನರಿತು ಗುರುಕೊಟ್ಟ ಇಷ್ಟಲಿಂಗದಲ್ಲಿಯೇ ಎಲ್ಲ
ತೀರ್ಥಂಗಳೂ ಎಲ್ಲ ಕ್ಷೇತ್ರಂಗಳೂ ಇದ್ದಾವೆಂದು ಭಾವಿಸಿ
ಮುಕ್ತರಪ್ಪುದಯ್ಯಾ
ಇಂತಲ್ಲದೆ ಗುರು ಕೊಟ್ಟ ಲಿಂಗವ ಕಿರಿದು ಮಾಡಿ
ತೀರ್ಥಲಿಂಗವ ಹಿರಿದು ಮಾಡಿ ಹೋದಾತಂಗೆ
ಅಘೋರನರಕ ತಪ್ಪದು ಕಾಣಾ ಚೆನ್ನಮಲ್ಲಿಕಾರ್ಜುನಾ

-ಅಕ್ಕಮಹಾದೇವಿ, ೫-೪೭೭

ಜಗದಗಲ, ಮುಗಿಲಗಲ, ಮಿಗೆಯಗಲ ಪಾತಾಳದಿಂದತ್ತತ್ತ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ಮುಕುಟ ಅಗಮ್ಯ, ಅಗೋಚರ, ಅಪ್ರತಿಮ, ಅಪ್ರಮಾಣ ಲಿಂಗವು ಕರಸ್ಥಳದಲ್ಲಿ ಕುಳಿತ ಮೇಲೆ ಮತ್ತು ತೀರ್ಥಕ್ಷೇತ್ರ, ಪುಣ್ಯಕ್ಷೇತ್ರ ಎಂದು ಹೋಗುವ ಅವಶ್ಯಕತೆ ಇಲ್ಲ ಎಂದು ಹೇಳುತ್ತಾರೆ. ಇಷ್ಟಲಿಂಗದ ತತ್ತ್ವ ಮಹತ್ವಗಳನ್ನು ಅರ್ಥಮಾಡಿಕೊಂಡಲ್ಲಿ ಇಷ್ಟ ಲಿಂಗದ ಹಿರಿಮೆ ಅರಿವಾಗತೊಡಗುತ್ತದೆ. ಜಂಗಮರನ್ನು ಶಿರಬಾಗಿ ಕೈಯಿಂದ ಮುಟ್ಟಿ ಪೂಜಿಸಿದರೆ ಈ ಬದುಕು ಜೀವನವೇ ಪಾವನವಾಗುತ್ತದೆ. ಇಂತಹ ಇಷ್ಟಲಿಂಗವನ್ನು ಕಿರಿದು ಮಾಡಿ ದೂರದಲ್ಲಿದ್ದ ದೇವರುಗಳಿಗೆ ವಂದಿಸುವವರನ್ನು ವ್ರತಗೇಡಿಗಳು ಎಂದು ಕರೆಯುತ್ತಾರೆ.

'ಇಷ್ಟಲಿಂಗವನ್ನು ಕಟ್ಟಿಕೊಂಡು ಪುಣ್ಯಕ್ಷೇತ್ರ, ತೀರ್ಥಕ್ಷೇತ್ರ ಹೋಗುವವರ ಪರಿ ಹಾಲು ಇಟ್ಟುಕೊಂಡು ಬೆಣ್ಣೆಗಾಗಿ ಅರಸುವಂತೆ'. ಹಾಗೆ ಮಾಡಿದ್ದಾದರೆ ನಾಯಿಯ ಹೊಟ್ಟೆಯಲ್ಲಿ ನಮ್ಮ ಮುಂದಿನ ಜನ್ಮ ಎಂದು ಎಚ್ಚರಿಸುತ್ತಾರೆ. ಗುರು ಕೊಟ್ಟ ಇಷ್ಟಲಿಂಗದಲ್ಲಿಯೇ ಎಲ್ಲಾ ತೀರ್ಥಗಳೂ ಪುಣ್ಯಕ್ಷೇತ್ರಗಳೂ ಇದ್ದಾವೆ. ಇದನರಿಯದೆ ಮತ್ತೆ ಬೇರೆ ತೀರ್ಥಕ್ಷೇತ್ರ ಪುಣ್ಯಕ್ಷೇತ್ರಗಳೆಂದು ಹೋದವರಿಗೆ ನರಕ ತಪ್ಪದು ಎಂದಿದ್ದಾರೆ ಅಕ್ಕ ❑

* 'ಅನುಭವ ಮಂಟಪ' 4ನೇ ಅಡ್ಡರಸ್ತೆ, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು-572 104.







# ಶ್ರೀ ಶ್ರೀಗಳವರ ಅನುಗ್ರಹ

-ಕೆ.ಜಿ. ರಂಗಯ್ಯ *

ತಪ್ಪುಗಳನ್ನೆಸಗಿ ಶ್ರೀ ಶ್ರೀಗಳವರ 'ಅನುಗ್ರಹ'ಕ್ಕೆ ಪಾತ್ರರಾಗುತ್ತಿದ್ದ ಗೆಳೆಯರನೇಕರ ಅನುಭವಗಳಿಂದ ವಂಚಿತನಾಗಿದ್ದ ನನ್ನ ಮನಸ್ಸು ಆ ಒಂದು ಸವಿಯನ್ನು ಪಡೆಯಲು ಚಡಪಡಿಸುತ್ತಿತ್ತು. ಇದಕ್ಕೆ ಕಾರಣ ಈ ಹಿಂದಿನ ನೆನಪೊಂದರಲ್ಲಿ ನಾನು ಉಲ್ಲೇಖಿಸಿರುವಂತೆ ನನ್ನ ಬಂಧು ಹಿರಿಯಜ್ಜ ಕೋಡಪ್ಪನವರು ಉಪದೇಶಿಸಿದ್ದ ಒಂದು ಮಾತು. 'ಶ್ರೀ ಶ್ರೀಗಳವರ ಛಡಿಯ ಸ್ಪರ್ಶದಿಂದ ಮೈಮೇಲಿನ ಶತಕೋಟಿ ಭೂತಗಳು ಬಿಟ್ಟು ಓಡಿಹೋಗುತ್ತವೆ' ಎಂಬುದು. ವಿದ್ಯಾರ್ಥಿಗಳಿಗೆ ಆಲಸ್ಯಕ್ಕಿಂತ ದೊಡ್ಡಭೂತವಿರದೆಂದೇ ನಂಬಿದ್ದ ನನಗೆ ಕಪಟ, ಸುಳ್ಳು, ವಂಚನೆ, ಈರ್ಷ್ಯೆ ಇಂತಹ ಅನೇಕಾನೇಕ ಭೂತಗಳಿಂದಲೂ ಮುಕ್ತಿ ಹೊಂದಬೇಕೆಂಬ ಮಹದಾಸೆಯಿತ್ತು. ಹಾಗಾಗಿ ಬೇಕೆಂತಲೇ ಒಮ್ಮೆ ತಪ್ಪು ಮಾಡದ ಹೊರತು ನನಗೆ ಶ್ರೀಗಳ ಅನುಗ್ರಹ ದೊರೆಯದೆಂದೆನಿಸಿತು.

ಬೇಸಿಗೆಯ ರಜೆಯ ಒಂದು ಮಧ್ಯಾಹ್ನ ಬೆಳಗಿನ ಶ್ರಮದಾನ ನಂತರ ತಣ್ಣೀರಿನ ಸ್ನಾನ ಮತ್ತು ರಜೆಯ ಮಜವಾದ ಭೋಜನ ಇವುಗಳಿಂದ ಉತ್ತೇಜಿತರಾದ ನಾನು ಮತ್ತು ಗೆಳೆಯರಾದ ಆರ್.ವೀರಣ್ಣ, ರಾಮಚಂದ್ರರಾವ್, ಕೆಂಪಯ್ಯ, ಬೆಟ್ಟಸ್ವಾಮಿ... ನಾಲ್ಕೈದು ಮಂದಿ ಶ್ರೀ ಶ್ರೀಗಳವರ ಹಳೆಯ ಮಠದಿಂದ ಹೊರಟು ಕಛೇರಿ ತಲುಪಿದ ಸುಳಿವು ಆಟದಲ್ಲಿ ತಲ್ಲೀನರಾಗಿದ್ದ ನಮಗಾರಿಗೂ ಸಿಕ್ಕಿರಲಿಲ್ಲ. ಮರ ಹತ್ತಿ ಧುಮುಕುವುದರಲ್ಲಿ ಬಲ ಮತ್ತು ಪ್ರಾವೀಣ್ಯತೆಗಳು ಇರದಿದ್ದ ನಾನು ಹಳೆಯ ಮಠದ ಕಡೆಗಿದ್ದ ಗೋಡಂಬಿ ಮರದಲ್ಲಿನ ಹಣ್ಣುಗಳನ್ನು ಎಟುಕಿಸಿ ಕಿತ್ತು ಒಂದೆರಡು ಹಣ್ಣುಗಳನ್ನು ತಿಂದು ಸಾಕೆನಿಸಿದಾಗ; ಗೋಡಂಬಿಯ ಬೀಜಗಳನ್ನು ಸುಟ್ಟು ತಿನ್ನುವ ಆಸೆಯಿಂದ ತರುಗು ತರಗು ಪುಳ್ಳೆಗಳನ್ನು ಒಟ್ಟಿ ಬೆಂಕಿ ಹೊತ್ತಿಸಿ ಕುಳಿತೆನು. ಗೋಡಂಬಿಯ ಬೀಜವನ್ನು ಸುಟ್ಟಾಗ ಬರುವ ವಿಶಿಷ್ಟ ಕಂಪು ಎಂಥವರನ್ನೂ ಸೆಳೆಯಬಲ್ಲದು. ಅದು ಮರದ ಮೇಲೆ ಹತ್ತಿ ಕಿಚಪಚ ಕಿರುಚಾಡುತ್ತಿದ್ದ ಎರಡು ಕಾಲಿನ ನನ್ನ ಜೊತೆಯ ಮಂಗಗಳನ್ನು ನನ್ನೆಡೆಗೆ ಸೆಳೆದದ್ದಲ್ಲದೆ, ಗಾಳಿಯಲ್ಲಿ ತೇಲಿ ಹೋಗಿ ಶ್ರೀ ಶ್ರೀಗಳವರನ್ನೂ ಮುಟ್ಟಿತು. ಇದರ ಪರಿಣಾಮ ಕಛೇರಿಯ ಪರಿಚಾರಕ ಶ್ರೀ ಹನುಮಯ್ಯನನ್ನು ಮುಟ್ಟಿತ್ತು. ನಮ್ಮೆಡೆಗೆ ಕರೆತರುವ ಸಾಹಸವನ್ನೂ ಮಾಡಿತ್ತು. ಸಾಲಾಗಿ ಕೈಕಟ್ಟಿ ಶ್ರೀಗಳವರ ಮುಂದೆ ನಿಂತದ್ದಾಯಿತು. ಮೊದಲೇ ನಿರ್ಧರಿಸಿದ್ದಂತೆ ನಾನೇ ಸ್ವಯಂಪ್ರೇರಿತನಾಗಿ ತಪ್ಪನ್ನೆಲ್ಲಾ ನನ್ನ ಮೈಮೇಲೆ ಎಳೆದುಕೊಂಡದ್ದೂ ಆಯಿತು. ಆದರೆ ಶ್ರೀ ಶ್ರೀಗಳವರು ಇಂದು ನನಗೆ ಮೋಕ್ಷ ಕರುಣಿಸುವವರೆಂಬ ನನ್ನೂಹೆ ಸುಳ್ಳಾಯಿತು. ಏಕೆಂದರೆ ಒಬ್ಬೊಬ್ಬರನ್ನೇ ಹತ್ತಿರ ಕರೆದು ಅಮರಕೋಶದ ಮೊದಲ ಸರ್ಗವನ್ನು ಒಪ್ಪಿಸಲು ಅಪ್ಪಣೆ ಮೂಡಿದಾಗ ಬೆಪ್ಪನಾದ ನನ್ನನ್ನೂ ಸೇರಿಸಿ ಮೂರು ಮಂದಿ ಚಾಚೂ ತಪ್ಪದೆ ಒಪ್ಪಿಸಿದೆವು. ಉಳಿದವರು ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾದರು. ನಾನು ನನ್ನ ಬೆಪ್ಪುತನದಿಂದಾಗಿ ಅಮರಕೋಶವನ್ನು ಒಪ್ಪಿಸಿ ತಪ್ಪೆಸಗಿದ್ದು ಅರಿವಾಗುವಷ್ಟರಲ್ಲಿ ಸಂಜೆಯ ಶ್ರಮದಾನಕ್ಕೆ ಶ್ರೀ ಸಿ.ಎಂ.ಆರ್. ರವರ ಕೂಗಿನ ಕರೆಗಂಟೆ ಹೊರಗೆ ನಿನಾದಿಸಿತ್ತು! ❑

**ಶ್ರೀವಾಣಿ**

*ಮಾನವನಾಗಿ ಹುಟ್ಟಿದ ಮೇಲೆ ಮಾನವನಾಗಿ ಬೆಳೆಯಬೇಕೆ ವಿನಃ ಮೃಗವಾಗಿ ಬದುಕುವುದಲ್ಲ. ಅವನ ಒಂದೊಂದು ಭಾವನೆಯು ಮಾನವ ಕಲ್ಯಾಣಕ್ಕೆ ಮೀಸಲಾಗಬೇಕು. ಏನಾದರೂ ಆಗು ಮೊದಲು ಮಾನವನಾಗಿ ಬದುಕುವ ಭಾವನೆಗಳನ್ನು ಬೆಳೆಸಿಕೊಳ್ಳಬೇಕು. ವ್ಯಕ್ತಿತ್ವ ವಿಕಸನಕ್ಕೆ ಸದ್ಭಾವನಾಯುಕ್ತ ಸಂಸ್ಕಾರಗಳ ಮಾರ್ಗದರ್ಶನ ಅಗತ್ಯವಾಗಿರಬೇಕು. ಈ ಉದಾತ್ತ ಭಾವನೆಗಳನ್ನು ಬಿತ್ತುವ ಯೋಗ್ಯರ ಸಂಪನ್ನರ ಸಹವಾಸವೂ ಬೇಕು. ಆಗಲೇ ನೆಮ್ಮದಿ ಶಾಂತಿ ಸಮೃದ್ಧಿ.*

* ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ॥, ರಾಮನಗರ ಜಿಲ್ಲೆ.

## ಆತ್ಮೋನ್ನತಿ

–ಷಣ್ಮುಖಪ್ಪ ಬಮ್ಮಣ ಕಮಲಾಪುರ *

ಶರೀರ ಎಂಬ ಶಬ್ಧಕ್ಕೆ ಹಾಳಾಗುವುದು ಎಂದು ಅರ್ಥ. ಅಂತಹವುಗಳ ಮೇಲೆ ಮೋಹ ಬೆಳೆಸಿಕೊಳ್ಳುವುದು ಒಳ್ಳೆಯ ಕೆಲಸ ಹೇಗೆ ಆಗುತ್ತದೆ? ಶರೀರ ಮಣ್ಣಿನಲ್ಲಿ ಬೆರೆತು ಹೋದರೂ ಶಾಶ್ವತವಾಗಿ ಇರುವ ಆತ್ಮ ಇದೆಯಾದುದರಿಂದ ನಾವು ಒಳ್ಳೆಯದನ್ನೇ ಮಾಡಬೇಕು. ನಾವು ಮಾಡುವ ಪ್ರತಿ ಕರ್ಮದಿಂದಲೂ ನಮಗೆ ಪುಣ್ಯಪಾಪಗಳು ಉಂಟಾಗುತ್ತವೆ. ಶರೀರವು ಹೋದರೂ ಆ ಪುಣ್ಯಪಾಪಗಳು ಆತ್ಮವನ್ನು ಬಿಡುವುದಿಲ್ಲ. ಅವುಗಳ ಫಲಗಳಾದ ಸುಖದುಃಖಗಳನ್ನು ಅತ್ಮ ಅನುಭವಿಸಿದರೆ ಮಾತ್ರ ಅವು ನಶಿಸುವುದಿಲ್ಲ. ಹಾಗಾಗಿ ಆತ್ಮ ನಶಿಸಿ ಹೋಗುವಂತಹ ಶರೀರಗಳ ಸಂಬಂಧ ಹೊಂದುವುದೇ ಜೀವನವೆಂದು ತಿಳಿದುಕೊಳ್ಳಬೇಕು.

ಹುಟ್ಟುಸಾವುಗಳು ಶರೀರಕ್ಕೆ ಹೊರತು ಆತ್ಮಕ್ಕೆ ಅಲ್ಲ. ಶರೀರವನ್ನು ಆತ್ಮವು ಬಿಟ್ಟು ಹೋಗುವುದೇ ಮರಣ. ಶರೀರದೊಳಗೆ ಆತ್ಮವು ಪ್ರವೇಶ ಮಾಡುವುದೇ ಉತ್ಪತ್ತಿ. ಆತ್ಮ ನಿತ್ಯವಾದ ಕಾರಣ ಅದು ಹುಟ್ಟುವುದೂ ಅಲ್ಲ, ಸಾಯುವುದು ಇಲ್ಲ. ಅಂದರೆ ಯಾವಾಗಲೂ ಇರುತ್ತದೆ. ಹಾಗೆಂದೇ ಇದನ್ನು ಹುಟ್ಟಬಾರದುದೆಂದು ನಿತ್ಯವಾದುದೆಂದು, ಶಾಶ್ವತವಾದುದೆಂದು, ಪುರಾಣವಾದುದೆಂದೂ ಹೇಳುತ್ತಾರೆ. ಶರೀರಕ್ಕೆ ಸಾವು ಸಂಭವಿಸಿದರೂ ಆತ್ಮಕ್ಕೆ ಸಾವು ಇಲ್ಲ.

ಶರೀರಕ್ಕೂ ಆತ್ಮಕ್ಕೂ ಹೋಲಿಕೆಯಿಲ್ಲ. ಪಂಚಭೂತಗಳು ಶರೀರವನ್ನು ಏನಾದರೂ ಮಾಡಬಹುದು. ಆದರೆ ಆತ್ಮವನ್ನು ಮಾತ್ರ ಏನೂ ಮಾಡವು. ಶಸ್ತ್ರಗಳು ಶರೀರವನ್ನು ತುಂಡು ಮಾಡಬಹುದು. ಆತ್ಮವನ್ನು ಖಂಡಿಸಲಾರವು. ಬೆಂಕಿಯು ಶರೀರವನ್ನು ದಹಿಸುತ್ತದೆ. ಆದರೆ ಆತ್ಮವನ್ನು ಮುಟ್ಟುವುದಿಲ್ಲ. ನೀರು ಶರೀರವನ್ನು ಒದ್ದೆ ಮಾಡುತ್ತದೆ, ಆದರೆ ಆತ್ಮವನ್ನು ಏನೂ ಮಾಡಲಾರದು. ಆದ್ದರಿಂದ ಆತ್ಮ ಕತ್ತರಿಸಲಾಗದ, ದಹಿಸಲಾಗದ, ಒದ್ದೆ ಮಾಡಲಾಗದ, ಒಣಗಿಸಲಾಗದಂತಹುದು. ಇದು ನಿತ್ಯ ಸ್ಥಿರ, ಅಚಲ, ಸನಾತನ, ಹಾಗಾಗಿ ಬಾಹ್ಯಭೂತವಿಕಾರಗಳು ಇದರ ಮುಂದೆ ಕೆಲಸ ಮಾಡುವುದಿಲ್ಲ.

ಹುಟ್ಟುವ ಲಕ್ಷಣ ಹೊಂದಿದೆಲ್ಲಕ್ಕೂ ಸಾವು ಅನಿವಾರ್ಯ. ಅದಕ್ಕೆ ಅವನ್ನು ಅನಿತ್ಯವೆನ್ನುತ್ತೇವೆ. ಹುಟ್ಟಿದ ವ್ಯಕ್ತಿಗಳು, ವಸ್ತುಗಳು, ವಸ್ತುಗಳು ನಶಿಸಿಹೋಗುವುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ಸತ್ತು ಹೋದವರು ಪುನಃ ಹುಟ್ಟಲೇಬೇಕು. ಮೋಕ್ಷ ಪಡೆದವರಿಗೆ ಪುನರ್ಜನ್ಮವಿಲ್ಲ. ಪುನರ್ಜನ್ಮ ಸಿದ್ಧಾಂತವನ್ನು ಅಂಗೀಕರಿಸುವುದಕ್ಕೆ ನಮಗೆ ಸಾಕ್ಷ್ಯಾಧಾರಗಳು ಎಲ್ಲ ದೇಶಗಳಲ್ಲಿಯೂ ದೊರಕುತ್ತಿವೆ. ಹಾಗಾಗಿ ಈ ಶರೀರವನ್ನು ಬಿಟ್ಟು ಇನ್ನೊಂದು ಕಡೆ ಹುಟ್ಟಿದವನ ಬಗ್ಗೆ ಬಾಧೆ ಪಡುವುದು ಅವಿವೇಕವೇ ಹೌದು.

ನಮ್ಮ ಮನ ನಾವು ಹೇಳಿದಂತೆ ಕೇಳಿದರೆ ಇನ್ನು ಈ ಲೋಕದಲ್ಲಿ ಜಯಿಸಲಾಗದ್ದು ಯಾವುದೂ ಇರದು. ಅದು ಅಭ್ಯಾಸದಿಂದ ಬರಬೇಕಾದದ್ದೇ ಹೊರತು ಒಂದೇ ಸಲ ಉಂಟಾಗುವುದಿಲ್ಲ. ನಿನ್ನ ಮನ ನಿನ್ನ ಅಂಗೈಯಲ್ಲಿಲ್ಲವಾದ ಕಾರಣ ನೀನು ಸುಖ ಬಂದರೂ ದುಃಖವಾದರೂ ತಬ್ಬಿಬ್ಬಾಗುವೆ. ಕಳವಳ ಭಯ ನಿನ್ನಲ್ಲಿ ಮನೆ ಮಾಡಿದೆ. ಎಷ್ಟು ದುಃಖ ಬಂದರೂ ಮನಸ್ಸು ಕ್ಷೋಭೆಗೊಳಗಾಗಬಾರದು. ಸುಖ ಬಂದಾಗ ಮೈಮೇಲೆ ಎಚ್ಚರವಿರಬೇಕು. ಭಯವನ್ನು ರಾಗ ದ್ವೇಷಗಳನ್ನು ಹತ್ತಿರಬರಗೊಡಬಾರದು. ಹಾಗೆ ಇರುವುದನ್ನು ಅಭ್ಯಾಸ ಮಾಡಿದರೆ ಒಳಿತಾದರೂ ಕೆಟ್ಟದ್ದಾದರೂ ಅವುಗಳ ಪ್ರಭಾವ ನಿನ್ನ ಮೇಲಾಗದು. ಅವುಗಳನ್ನು ಹೊಗಳುವುದಾಗಲೀ ದ್ವೇಷಿಸುವುದಾಗಲೀ ನಡೆಯದು. ನೀನು ಸ್ಥಿತಪ್ರಜ್ಞನಾಗುವೆ.

ನೀನು ಇಂದ್ರಿಯಗಳನ್ನು ನಿಗ್ರಹಿಸದೆ ಮನಸ್ಸನ್ನು ನಿಗ್ರಹಿಸಲು ಪ್ರಯತ್ನಿಸಿದರೆ ಸಫಲವಾಗುವುದಿಲ್ಲ. ಮನಸ್ಸಿಗಿಂತಲೂ ಇಂದ್ರಿಯಗಳು ಹೆಚ್ಚು ಪ್ರಬಲವಾದವು. ಅವುಗಳ ಮುಂದೆ ಮನ ಬಹಳ ದುರ್ಬಲವಾದದ್ದು. ಹಾಗಾಗಿ ನೀನು ಎಷ್ಟು ಶಾಸ್ತ್ರಗಳನ್ನೋದಿದರೂ ಎಷ್ಟೇ ಪ್ರಯತ್ನಪಟ್ಟರೂ ಪ್ರಯೋಜನವಿಲ್ಲ. ಮೊದಲು ಇಂದ್ರಿಯಗಳು ವಿಜೃಂಭಿಸದಂತೆ ನೋಡಿಕೊಳ್ಳಬೇಕು. ಇಂದ್ರಿಯಗಳನ್ನು ಜಯಿಸುವಲ್ಲಿ ಉಪವಾಸಾದಿ ವ್ರತಗಳು, ಧ್ಯಾನ ಸಹಾಯಕ. ಆಗ ನಿನಗೆ ಇಂದ್ರಿಯ ಜಯ ಉಂಟಾಗಿ ನಿನ್ನ ಮನ ನೀನು ಹೇಳಿದಂತೆ ಕೇಳುವುದು. ನಮ್ಮ ಆಚಾರ ವ್ಯವಹಾರ, ನಿಯಮನಿಷ್ಠೆ, ವ್ರತ, ಉಪವಾಸಗಳೆಲ್ಲವೂ ಇಂದ್ರಿಯ ನಿಗ್ರಹಕ್ಕಾಗಿಯೇ ಆದದ್ದು. ಅದ್ದರಿಂದ ರೋಗ ಎಲ್ಲಿದೆಯೋ ಅಲ್ಲಿಗೆ ಔಷಧಿ ನೀಡಬೇಕು. ❑

* C/o ಶ್ರೀಮತಿ ಮಹಾದೇವಿ ಶಾಸ್ತ್ರಿ, ಮನೆ ನಂ. 4–202, ಸರಾಫ ಬಜಾರ, ಮುಕ್ತಂಪೂರ, ಗುಲಬರ್ಗಾ –585 101.

